# ದೇವರ ಚಿಹ್ನ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ದೇವರ ಚಿಹ್ನ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38    ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000    **ಬೆಲೆ. 80/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮೀನಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್,
ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ದೇವರ ಚಿಹ್ನ



ದೇವರ ವೊಂದರ ಗುರುತನ್ನು ‘ದೇವರ ಚಿಹ್ನೆ’ ಎಂದು ಅನ್ನಬಹುದು. ಚಿಹ್ನೆ ಎಂದರೆ ‘ಗುರುತು’ ಆದಾಗ ದೇವರ ಚಿಹ್ನೆ ಎಂದರೇ ದೇವರ ಶಕ್ತಿಯೊಂದಿಗೆ ಸಮಾನವಾದ ಅಥವಾ ದೇವರ ಬೆಲೆಯೊಂದಿಗೆ ಸಮಾನವಾದ ಗುರುತು ಎಂದು ಹೇಳಬಹುದು. ಏನೂ ಆಗದವನು ‘ದೇವರು’ ಆದಾಗ ದೇವರಿಗೆ ಗುರುತು ಎನ್ನುವುದು ಇರುತ್ತದಾ? ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ದೇವರು ಎಂದರೆ ಹುಡುಕಬೇಕಾದವನೇ ಹೊರತು, ಕಾಣಿಸುವವನಲ್ಲ. ದೇವರು ಎಂದರೆ ಇರುವವನೇಯಾಗಲೀ, ಸಿಗುವವನು ಅಲ್ಲ. ದೇವರು ಎಂದರೆ ಕ್ರಿಯೆ ಇಲ್ಲದವನಾಗಲೀ, ಕ್ರಿಯೆಗಳು ಮಾಡುವವರಿಗೆ ಕ್ರಿಯೆಗಳು ಮಾಡದ ದೇವರು ತಿಳಿಯುವುದಿಲ್ಲ. ಯಾರು ಯಾವ ರೀತಿ ಯೋಚಿಸಿದರೂ ತಿಳಿಯದವನು ದೇವರು. ಆದ್ದರಿಂದ ಆತನನ್ನು ಇಂತಹವನೆಂದು ಯಾರೂ ಹೇಳಲಾರರು, ಆತನಿಗೆ ಸಂಬಂಧಿಸಿದ ಯಾವ ಗುರುತನ್ನು ಯಾರೂ ತೋರಿಸಲಾರರು. ಅಂತಹ ಪರಿಸ್ಥಿತಿಯಲ್ಲಿ ದೇವರ ಚಿಹ್ನೆ ಎನ್ನುವುದು ವೊಂದಿದೆಯಾ? ಎಂದು ಕೇಳುವುದರಲ್ಲಿ ನ್ಯಾಯವಿದೆ. ಹೇತುಬದ್ಧವಾದ ಈ ಪ್ರಶ್ನೆಗೆ ಮನುಷ್ಯರ ಕಡೆಯಿಂದ ಉತ್ತರ ಇಲ್ಲ. ಆದರೆ ಈ ಪ್ರಶ್ನೆಗೆ ದೇವರೆ ತನ್ನ ಮಾತಿನಲ್ಲಿ ಆತನಿಗೆ ಒಂದು ಗುರುತು ಇದೆಯೆಂದು ಹೇಳಿದ್ದಾನೆ. ದೇವರು ತನ್ನ ಗುರುತನ್ನು ತಾನೇ ಹೇಳಿದಾಗ ಮನುಷ್ಯರು ತಿಳಿಯಬಲ್ಲರು ಆದರೆ, ಮನುಷ್ಯ ಸ್ವತಃವಾಗಿ ದೇವರನ್ನು ಕುರಿತಾಗಲಿ, ದೇವರ ಗುರುತನ್ನು ಕುರಿತಾಗಲಿ ಹೇಳಲಾರರು.

ಮನುಷ್ಯ ಹೇಳಲಾರದ ದೇವರ ವಿಷಯವನ್ನು ದೇವರೆ ಹೇಳಬೇ ಕಾಗಿರುತ್ತದೆ. ಅಂತಿಮ ದೈವ ಗ್ರಂಥವಾದ ಖುರಾನ್‌ನಲ್ಲಿ ಸೂರಾ 3 ಆಯತ್ 7 ರ ಪ್ರಕಾರ **‘ದೇವರ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದು’,** ಪ್ರಥಮ ದೈವ ಗ್ರಂಥವಾದ ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗ 2ನೇ ಶ್ಲೋಕದ ಪ್ರಕಾರ **‘ದೇವರ ಜ್ಞಾನ ರಹಸ್ಯಗಳಲ್ಲಿ ರಹಸ್ಯವಾದದ್ದೆಂದು’.** ಮಧ್ಯ ದೈವಗ್ರಂಥ ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆ ಮೊದಲನೆಯ

ಅಧ್ಯಾಯ 5ನೇ ವಾಕ್ಯದ ಪ್ರಕಾರ **'ಆ ಬೆಳಕು ಕತ್ತಲಲ್ಲಿ ಪ್ರಕಾಶಿಸುತ್ತಿದೆಯಾಗಲಿ ಕತ್ತಲು ಅದನ್ನು ಗ್ರಹಿಸದಂತಿತ್ತು."** ದೇವರ ಜ್ಞಾನವಾಗಲಿ, ದೇವರ ಗುರುತಾಗಲಿ ಯಾವ ಮನುಷ್ಯನಿಗೂ ತಿಳಿಯದು. ದೇವರ ಜ್ಞಾನವಾದರೂ, ದೇವರ ಗುರುತಾದರೂ ದೇವರೆ ಮನುಷ್ಯನಿಗೆ ಹೇಳಬೇಕಾಗಿದೆ. ಮೂರು ದೈವ ಗ್ರಂಥಗಳ ಸಾಕ್ಷಿಯಾಗಿ ಮನುಷ್ಯನಿಗೆ ದೇವರನ್ನು ಕುರಿತು ಏನೂ ತಿಳಿಯದು. ದೇವರು ಹೇಳಿದಾಗ ದೇವರ ಬೋಧೆಯಿಂದ ಮನುಷ್ಯ ತಿಳಿಯಬೇಕಾಗಿದೆ. ಆದರೆ ದೇವರು ಯಾವಾಗ ಹೇಳುವನೋ? ಹೇಗೆ ಹೇಳುವನೋ? ಯಾರಿಗೂ ತಿಳಿಯದು. ಆದ್ದರಿಂದ ದೇವರು ಬಂದು ಹೇಳಿದರೂ, ಮನುಷ್ಯ ದೇವರು ಹೇಳಿದ ಜ್ಞಾನವನ್ನು ನಂಬಲಾರದಂತಿದ್ದಾನೆ. ದೇವರು ಸ್ವತಃವಾಗಿ ಜ್ಞಾನವನ್ನು ಹೇಳಿದಾಗ ಮನುಷ್ಯ ಅದನ್ನು ಸುಲಭವಾಗಿ ತಿಳಿಯಬೇಕಿದ್ದರೂ ಹೇಳುವವನಮೇಲೆ ನಂಬಿಕೆ ಇಲ್ಲದಿರುವುದರಿಂದ ದೇವರು ಹೇಳಿದರೂ ಹೇಳುವವನು ದೇವರು ಎಂದೂ, ಹೇಳುತ್ತಿರುವುದು ನಿಜವಾದ ಜ್ಞಾನವೆಂದಾಗಲಿ ಮನುಷ್ಯ ತಿಳಿಯಲಾರದಂತಿದ್ದಾನೆ.

ದೇವರು ಸ್ವತಃವಾಗಿ ನನ್ನ ಜ್ಞಾನ ನನಗೇ ತಿಳಿದಿರುತ್ತದೆಂದು ಹೇಳಿ, ತಾನೇ ತನ್ನ ಜ್ಞಾನವನ್ನು ತಿಳಿಸುವಾಗ ಮನುಷ್ಯ ದೇವರ ಜ್ಞಾನವನ್ನು ತಿಳಿಯಬಹುದು. ಹಾಗೇ ದೇವರಿಗೆ ಸಂಬಂಧಿಸಿದ ಗುರುತನ್ನು (ಚಿಹ್ನವನ್ನು) ಸಹ ತಿಳಿಯಬಹುದು. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೇ! ದೇವರೇ ಸ್ವತಃವಾಗಿ ತನ್ನ ಜ್ಞಾನವನ್ನು ಹೇಳಿದಾಗ ಬುದ್ಧಿ ಶ್ರದ್ಧೆ ಇರುವವರು ಅದನ್ನು ಗ್ರಹಿಸಬಹುದು. ಆದರೇ ದೇವರು ಹೇಳಿದ ದೇವರ ಗುರುತನ್ನು ಆತನ ಜ್ಞಾನದಿಂದ ಹೇಗೆ ತಿಳಿಯಬಹುದು? ಎಂದು ಕೇಳುವುದಕ್ಕೆ ಅವಕಾಶವಿದೆ. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ. ಒಂದು ಮನೆಯನ್ನು ಕುರಿತು ವರ್ಣಿಸಿ ಹೇಳಿದಾಗ ಬುದ್ಧಿವಂತರು ಆ ಮನೆ ಆಕಾರವನ್ನು ಚಿತ್ರಿಸಿಕೊಳ್ಳಬಹುದು. ಮನೆಗೆ ಇಂತಹ ದಿಕ್ಕಿನಲ್ಲಿ ಬಾಗಿಲು ಇದೆಯೆಂದು, ಅದಕ್ಕೆ ಇಷ್ಟೇ ದೂರದಲ್ಲಿ ಕಿಟಕೀ ಇದೆಯೆಂದೂ, ಆ ಕಿಟಕೀಗೆ

ಎಡಗಡೆ ಅಡಿಗೆಮನೆ, ಬಲಗಡೆ ಮಲಗುವ ಕೊಠಡಿ, ಅದಕ್ಕೆ ಹಿಂದೆ ಸ್ನಾನದ ಕೊಠಡಿ ಎಂದು ಮನೆ ವಿವರವನ್ನು ಹೇಳಿದಾಗ ಆ ಮನೆಯನ್ನು ಆಲೋಚಿಸಿ ಚಿತ್ರಿಸಿ ತೋರಿಸಬಹುದು. ಅದೇ ರೀತಿ ದೇವರು ತನ್ನನ್ನು ಕುರಿತು ತಾನೇ ಸ್ವತಃವಾಗಿ ಹೇಳಿದಾಗ ದೇವರ ಮೇಲೆ ಶ್ರದ್ಧೆ, ಬುದ್ಧಿ ಇರುವ ಮನುಷ್ಯ ದೇವರ ಚಿಹ್ನವನ್ನು ಚಿತ್ರಿಸಿಕೊಳ್ಳಬಹುದು. ದೇವರ ಜ್ಞಾನ ಒಂದು ಮತಕ್ಕೆ ಸಂಬಂಧಿಸಿರುವುದು ಅಲ್ಲ. ದೇವರ ಜ್ಞಾನ ಮನುಷ್ಯ ಜಾತಿಗೆ ಸಂಬಂಧಿಸಿರುವುದು ಆಗಿರುವುದರಿಂದ ದೇವರ ಚಿಹ್ನೆ ಸಹ ಒಟ್ಟು ಮನುಷ್ಯ ಜಾತಿಗೆ ಸಂಬಂಧಿಸಿರುವುದಾಗಿ ಇರುತ್ತದೆ ಆದರೆ, ಒಂದು ಮತಕ್ಕೆ ಸಂಬಂಧಿಸಿ ಇರುವುದಿಲ್ಲ.

ಪ್ರಸ್ತುತ ಕಾಲದಲ್ಲಿ ಭೂಮಿಮೇಲೆ ಹನ್ನೆರಡು ಮತಗಳಿವೆ. ಒಂದೊಂದು ಮತ ಒಂದು ಗುರುತನ್ನಾಗಲಿ, ಎರಡು ಅಥವಾ ಅದಕ್ಕಿಂತ ಹೆಚ್ಚು ಗುರುತುಗಳು ಹೊಂದಿರುವುದನ್ನು ನೋಡುತ್ತಲೆ ಇದ್ದೇವೆ. ಶಿಲುಬೆ ಗುರುತನ್ನು ನೋಡುತ್ತಲೆ ಇದು ಕ್ರೈಸ್ತ ಮತವೆಂದು ಕೂಡಲೆ ಹೇಳಬಹುದು. ಹಾಗೆಯೇ ಉದ್ದ ನಾಮಗಳನ್ನಾಗಲಿ, ಅಡ್ಡನಾಮಗಳನ್ನಾಗಲಿ, 'ಓಂ' ಕಾರವನ್ನಾಗಲೀ ನೋಡುತ್ತಲೆ ಇದು ಹಿಂದೂಗಳ ಗುರುತೆಂದು ಹೇಳಬಹುದು. ಹಾಗೇ ಚಂದ್ರನನ್ನು, ನಕ್ಷತ್ರವನ್ನು ನೋಡಿದರೂ, ಮಕ್ಕಾದಲ್ಲಿನ ಕಾಬಾ ಗೃಹದ ಗೊಂಬೆಯನ್ನು ನೋಡಿದರೂ, ಇದು ಇಸ್ಲಾಮ್ ಮತವೊಂದರ ಗುರುತೆಂದು ಜನರು ಹೇಳುತ್ತಿರುವರು. ಅದರೆ ದೇವರ ಗುರುತು ಯಾವ ಮತಕ್ಕೂ ಸಂಬಂಧವಿಲ್ಲವೆಂದು ಹೇಳಬಹುದು. ದೇವರ ಚಿಹ್ನೆ ದೇವರು ಹೇಳಿದ ಜ್ಞಾನವನ್ನನುಸರಿಸಿ ತಯಾರಾಗಿರುತ್ತದೆ, ಆದ್ದರಿಂದ ಅದು ಯಾವ ಮತಕ್ಕೂ ಸಂಬಂಧವಿರುವುದಿಲ್ಲ. ದೇವರ ಚಿಹ್ನೆ ದೈವಗ್ರಂಥಗಳೊಂದಿಗೆ ಸಂಬಂಧವಾಗಿರುತ್ತದಾಗಲಿ, ಮತಗಳೊಂದಿಗೆ ಸಂಬಂಧವಾಗಿರುವುದಿಲ್ಲ. ಮನೆ ವರ್ಣನೆಯನ್ನನುಸರಿಸಿ ಮನೆಯನ್ನು ಚಿತ್ರಿಸಿದಂತೆ ದೇವರ ಜ್ಞಾನವನ್ನನುಸರಿಸಿ ದೇವರ ಚಿಹ್ನೆಯನ್ನು ಚಿತ್ರಿಸಬಹುದು. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ದೇವರು ತನ್ನ ಜ್ಞಾನವನ್ನು ಹೇಳಿದ್ದಾನಾಗಲಿ, ತನ್ನ ಚಿಹ್ನವನ್ನು ಕುರಿತು ಎಲ್ಲೂ ಹೇಳಲಿಲ್ಲ ಅಲ್ಲವೆ!

ಹಾಗಿರುವಾಗ ನೀವೇಕೆ ದೇವರ ಜ್ಞಾನಕ್ಕೆ ಒಂದು ಚಿಹ್ನವಿದೆಯೆಂದು ಹೇಳುತ್ತಿದ್ದೀರ? ಎಂದು ಕೇಳಬಹುದು. ಅದಕ್ಕೆ ಉತ್ತರ ಈ ರೀತಿ ಇದೆ. ಪ್ರತಿವೊಂದಕ್ಕೂ ಒಂದು ಸ್ಥೂಲ, ಒಂದು ಸೂಕ್ಷ್ಮ ತಪ್ಪದೇ ಇರುತ್ತದೆ. ಒಬ್ಬ ಮನುಷ್ಯನನ್ನು ತೆಗೆದುಕೊಂಡು ನೋಡಿದರೆ ಸ್ಥೂಲ, ಸೂಕ್ಷ್ಮ ಎಂಬ ಎರಡು ವಿಧಗಳಾಗಿ ಇದ್ದಾನೆ. ಅದೇ ರೀತಿ ದೇವರ ಜ್ಞಾನವೂ ಸಹ ಸ್ಥೂಲ, ಸೂಕ್ಷ್ಮರೂಪಗಳಲ್ಲಿ ಇದೆಯೆಂದು ಹೇಳಬಹುದು. ದೇವರು ಸೂಕ್ಷ್ಮವಾದವನು, ಕಾಣಿಸುವವನಲ್ಲ ಎಂಬ ಮಾತು ವಾಸ್ತವವೆ. ಆದರೆ ದೇವರು ಸೂಕ್ಷ್ಮವೆ ಅಲ್ಲದೆ ಸ್ಥೂಲವಾಗಿಯೂ ಇದ್ದಾನೆ. ಸ್ಥೂಲವಾಗಿ ಇರುವವನನ್ನು ದೇವರು ಅನ್ನಬಾರದು. ಸ್ಥೂಲವಾಗಿ ಕಾಣಿಸುವಂತಿರುವ ದೇವರನ್ನು 'ಭಗವಂತನು' ಎಂದು ಹೇಳಬೇಕಾಗಲೀ 'ದೇವರು' ಎಂದು ಹೇಳಬಾರದು. ದೇವರು ಒಬ್ಬನೇ ಆದರೂ ಸ್ಥೂಲವಾಗಿ ಭಗವಂತನೆಂದೂ, ಸೂಕ್ಷ್ಮವಾಗಿ ದೇವರೆಂದು ಹೇಳಬೇಕು. ಸ್ಥೂಲವಾಗಿ ಇರುವಾಗ ದೇವರೆಂದೂ, ಸೂಕ್ಷ್ಮವಾಗಿ ಇರುವಾಗ ಭಗವಂತನೆಂದು ಹೇಳಬಾರದು. ಬಹಳ ಜನರಿಗೆ ದೇವರ ಸ್ಥೂಲ, ಸೂಕ್ಷ್ಮತೆಗಳನ್ನು ಕುರಿತು ತಿಳಿದಿರುವುದಿಲ್ಲ. ಕೆಲವರು ದೇವರು ಸ್ಥೂಲವಾಗಿ ಇರುವುದಿಲ್ಲವೆಂದು ಹೇಳುತ್ತಿರುವರು. ಅವರಿಗೆ ಅಲ್ಲಿಯವರಿಗೆ ತಿಳಿದಿರುತ್ತದೆ. ಆದ್ದರಿಂದ ಅವರು ಅಲ್ಲಿಯವರಗೆ ಮಾತನಾಡುತ್ತಿರುವರು.

**ದೇವರನ್ನು ಕುರಿತು ತಿಳಿದುಕೊಳ್ಳುವ ಶಕ್ತಿಯನ್ನು ಮನುಷ್ಯನಿಗೆ ದೇವರೆ ಕೊಡಬೇಕು**. ಇಲ್ಲದೆ ಹೋದರೆ ಮನುಷ್ಯ ಸ್ವತಃವಾಗಿ ದೇವರನ್ನು ಕುರಿತು ತಿಳಿಯಲಾರನು. ದೇವರು ತನ್ನ ಜ್ಞಾನವನ್ನು ಬೋಧನೆಗಳ ರೂಪದಲ್ಲಿ ಮತ್ತು ಗ್ರಂಥರೂಪದಲ್ಲಿ ಮನುಷ್ಯರಿಗೆ ಕೊಟ್ಟರೂ, ಅದು ಅರ್ಥವಾಗುವುದಕ್ಕೆ ದೇವರ ಅನುಮತಿ ಮನುಷ್ಯನಿಗೆ ಇರಬೇಕು. ದೇವರು ಮನುಷ್ಯನ ಭಾವವನ್ನನುಸರಿಸಿ, ಅವನ ವಿಧಾನವನ್ನನುಸರಿಸಿ ದೇವರಿಗೆ ಇಷ್ಟವಾದರೆ ಅವನಿಗೆ ಜ್ಞಾನ ಅರ್ಥವಾಗುವಂತೆ ಮಾಡಿ ಒಳ್ಳೆಯ ಮಾರ್ಗದಲ್ಲಿ ಕಳುಹಿಸುವನು, ಇಲ್ಲದೆ ಹೋದರೆ ದೇವರಿಗೆ ಅವನು ಇಷ್ಟವಾಗದೆ ಹೋದರೆ ಅವನಿಗೆ ತನ್ನ ಜ್ಞಾನ

ಅರ್ಥವಾಗದಂತೆ ಮಾಡಿ ಕೆಟ್ಟ ಮಾರ್ಗದಲ್ಲಿ ಆದರೂ ಕಳುಹಿಸುವನು. ಇದೇ ವಿಷಯವನ್ನೇ "ಅಂತಿಮ ದೈವ ಗ್ರಂಥ ಖುರಾನ್"ನಲ್ಲಿ ಬಹಳ ಸಲ ಹೇಳಿದ್ದಾನೆ. "ಪ್ರಥಮ ದೈವಗ್ರಂಥ ಭಗವದ್ಗೀತೆ"ಯಲ್ಲಿ ಸಹ ಹೇಳಿದ್ದಾನೆ. ದೇವರು ತನಗೆ ಇಷ್ಟವಾದವರನ್ನು ಜ್ಞಾನ ಮಾರ್ಗದಲ್ಲಿಯೂ, ಇಷ್ಟ ಇಲ್ಲದವರನ್ನು ಅಜ್ಞಾನ ಮಾರ್ಗದಲ್ಲಿಯೂ ಕಳುಹಿಸುವನೆನ್ನುವುದು ದೇವರು ಹೇಳಿದ ವಿಷಯವೆ, ಆದ್ದರಿಂದ ದೇವರ ಜ್ಞಾನ ಕೆಲವರಿಗೆ ಸಂಪೂರ್ಣವಾಗಿ ಅರ್ಥವಾಗುತ್ತದೆ. ಕೆಲವರಿಗೆ ಅಸಂಪೂರ್ಣವಾಗಿ ನಿಂತುಹೋಗಿದೆ. ಅಸಂಪೂರ್ಣ ಜ್ಞಾನಿಗಳಿಗೆ ದೇವರ ಸಂಪೂರ್ಣತೆ ತಿಳಿಯದು. ಆದ್ದರಿಂದ ತಮಗೆ ತಿಳಿದಿರುವುದೇ ಜ್ಞಾನವೆಂದುಕೊಂಡು, ತಿಳಿಯದಂತಿರುವುದೆಲ್ಲಾ ಅಜ್ಞಾನವೆಂದುಕೊಳ್ಳುವುದು ನಡೆಯುತ್ತಿದೆ. ಈ ರೀತಿ ಕೆಲವು ಮತದವರಿಗೆ ದೇವರ ಸ್ಥೂಲಜ್ಞಾನ ಮಾತ್ರವೆ ತಿಳಿದಿದೆ, ಮತ್ತು ಕೆಲವು ಮತದವರಿಗೆ ದೇವರ ಸೂಕ್ಷ್ಮ ಮಾತ್ರವೆ ತಿಳಿದಿದೆ, ಸ್ಥೂಲ ಯಾವ ಮಾತ್ರ ತಿಳಿಯದು. ಸಂಪೂರ್ಣ ಜ್ಞಾನಿಗಳಿಗೆ ದೇವರ ಸ್ಥೂಲ, ಸೂಕ್ಷ್ಮಗಳು ಎರಡೂ ತಿಳಿಯುತ್ತದೆ. ಸಂಪೂರ್ಣ ಜ್ಞಾನಿಗಳು ಭೂಮಿ ಮೇಲೆ ಅಪರೂಪವಾಗಿ ಇರುವುದರಿಂದ, ಒಂದು ವೇಳೆ ಇದ್ದರೂ ಅವರ ಮಾತನ್ನು ಯಾರೂ ಕೇಳದೆಹೋಗುವುದರಿಂದ, ಭೂಮಿ ಮೇಲೆ ಹೆಚ್ಚಿನ ಅಜ್ಞಾನ ಉಳಿದಿದೆಯೆಂದು ಹೇಳಬಹುದು.

ದೇವರು 'ನಿರಾಕಾರನು' ಎಂದು ನಿರ್ಣಯಿಸಿ ಹೇಳುವುದಕ್ಕೆ ಅವಕಾಶವಿಲ್ಲ. ಹಾಗೆಂದು 'ಸಾಕಾರನು' ಎಂದು ಹೇಳುವುದಕ್ಕೂ ಸಹ ಅವಕಾಶವಿಲ್ಲ. ದೇವರು ಸಾಕಾರನು, ನಿರಾಕಾರನು ಎರಡೂ ವಿಧಗಳಲ್ಲಿ ಇದ್ದಾನೆ. ದೇವರು ಯಾರ ನಿರ್ಣಯಕ್ಕೂ ಸಿಗದವನು. ಆದ್ದರಿಂದ ದೇವರು ಯಾವಾಗ, ಹೇಗಿರುವುದು ಯಾರೂ ಹೇಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ದೇವರು ಪ್ರತ್ಯಕ್ಷವಾಗಿ ಸಾಕಾರರೂಪದಲ್ಲಿ ನಮ್ಮ ಮುಂದೆ ಇದ್ದರೂ ನಾವು ಆತನನ್ನು ಗುರುತಿಸಲಾರೆವು. ದೇವರ ಜ್ಞಾನದ ಪ್ರಕಾರ ದೇವರನ್ನು ಸ್ಥೂಲ, ಸೂಕ್ಷ್ಮಗಳಾಗಿ ಹೇಳಬಹುದಾಗಲಿ, ಯಾವ ಮನುಷ್ಯನೂ ದೇವರನ್ನು ಸೂಕ್ಷ್ಮವಾಗಿಯಾಗಲೀ,

ಸ್ಥೂಲವಾಗಿಯಾಗಲೀ ಕಂಡುಕೊಳ್ಳಲಾರನು. ಭೂಮಿಮೇಲೆ ಇಲ್ಲಿಯವರೆಗೂ ದೇವರನ್ನು ನಾನು ನೋಡಿದ್ದೇನೆ ಎಂದು ಹೇಳುವವನು ಯಾರೂ ಇಲ್ಲ. ದೇವರ ಜ್ಞಾನದಿಂದ ದೇವರನ್ನು ತಿಳಿಯಬಹುದೆಂದು ಒಂದು ಕಡೆ ಹೇಳಿದರೂ, ಅದು ಮನುಷ್ಯ ಬದುಕಿರುವಾಗ ನಡೆಯಲಾರದ ಕೆಲಸ. ದೇವರ ಜ್ಞಾನದಿಂದ ದೇವರನ್ನು ಜೀವನದ ಅಂತ್ಯದಲ್ಲಿ ಎಂದರೆ ಮರಣದಲ್ಲಿ ತಿಳಿಯಬಹುದು, ಸಜೀವವಾಗಿ ಇರುವಾಗ ಯಾರೂ ತಿಳಿಯುವುದಕ್ಕೆ ಅವಕಾಶವಿಲ್ಲ. ಮನುಷ್ಯ ಸಂಪೂರ್ಣ ಜ್ಞಾನವನ್ನು ತಿಳಿಯುವುದಾದರೇ ಅವನು ದೇವರನ್ನು ತಿಳಿಯಬಹುದು. ಅದೇ ಅವನಿಗೆ ಆಖರೀ (ಕೊನೆಯ) ಮರಣವಾಗುತ್ತದೆ.

ಸಾಕಾರ ನಿರಾಕಾರವಿರುವ ದೇವರು ಯಾರಿಗೂ ತಿಳಿಯುವವನಲ್ಲ. ಅದು ಆತನ ನಿರ್ಣಯ. ಸಾಕಾರ ನಿರಾಕಾರಗಳಲ್ಲಿ ಅರ್ಥವಾಗದ ಅಗಮ್ಯ ಗೋಚರನಾದ ದೇವರನ್ನು ಆತನು ಹೇಳಿದ ಜ್ಞಾನವನ್ನನುಸರಿಸಿ ಒಂದು ಗುರುತಾಗಿ ನಿರ್ಣಯಿಸಿಕೊಳ್ಳಬಹುದು. ಹಾಗೆ ದೇವರ ಜ್ಞಾನದಿಂದ ಮಿಳಿತ ವಾಗಿರುವ ದೇವರ ಚಿಹ್ನೆ ಮತಗಳಿಗೂ, ಮನುಷ್ಯರ ಜ್ಞಾನಕ್ಕೂ ಅತೀತವಾಗಿ ಇರುತ್ತದೆ. **ದೇವರ ಚಿಹ್ನೆ ದೇವರ ಜ್ಞಾನದೊಂದಿಗೆ ಕೂಡಿರುತ್ತದೆ**. ಆದ್ದರಿಂದ ದೇವರ ಚಿಹ್ನೆಯನ್ನು ಬಿಡಿಸಿ ನೋಡಿದರೆ ಅದರಲ್ಲಿ ದೇವರ ಜ್ಞಾನವೇ ಹೊರಬೀಳುತ್ತದೆ. ದೇವರ ಚಿಹ್ನೆಯನ್ನು ಕುರಿತು ಮೂರು ದೈವಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇರುವಾಗ ಆ ವಿಷಯ ಯಾವ ಮತಸ್ಥನಿಗೂ ಅರ್ಥವಾಗದೆ ಹೋಗಿದೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆ ಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ 28ನೇ ಶ್ಲೋಕದಲ್ಲಿ ದೇವರ ಚಿಹ್ನೆಯನ್ನು ಕುರಿತು ಹೇಳಿದರೂ ಅದು ಯಾರಿಗೂ ಅರ್ಥವಾಗದಂತೆ ಹೋಗಿದೆ. ಹಾಗೆಯೇ ದ್ವಿತೀಯ ದೈವಗ್ರಂಥವಾದ ಬೈಬಲ್ ಯೋಹಾನ್ ಸುವಾರ್ತೆ 14ನೇ ಅಧ್ಯಾಯ ದಲ್ಲಿ ಆರನೇ ವಾಕ್ಯದಲ್ಲಿ **(4–14–6) "ನಾನೇ ಮಾರ್ಗವೂ, ಸತ್ಯವೂ, ಜೀವವೂ. ನನ್ನಿಂದಲೇ ಹೊರತು ಯಾರೂ ತಂದೆಯ ಹತ್ತಿರಕ್ಕೆ ಬರಲಾರರು"** ಎಂದು ದೇವರ ಗುರುತನ್ನು ಕುರಿತು ಹೇಳಿದರು, ಬೈಬಲ್ ಗ್ರಂಥವನ್ನು ಅನುಸರಿಸುವ

ಕ್ರೈಸ್ತರಿಗೂ ಅಲ್ಲಿ ಹೇಳಿದ ದೇವರ ಚಿಹ್ನೆ ಅರ್ಥವಾಗಲಿಲ್ಲ, ಇನ್ನೂ ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥ ವಿಷಯಕ್ಕೆ ಬಂದು ನೋಡಿದರೆ ಐದನೇ ಸೂರಾ, ಎರಡನೆ ಆಯತ್‌ನಲ್ಲಿ (5–2) ಮತ್ತು 22ನೇ ಸೂರಾ 32ನೇ ಆಯತ್‌ನಲ್ಲಿ ದೇವರ ಚಿಹ್ನೆಯನ್ನು ಕುರಿತು ಹೇಳಿದ್ದಾರೆ. **(5–2) "ವಿಶ್ವಾಸಿಸಿದ ಓ ಪ್ರಜೆಗಳೇ! ಅಲ್ಲಾಹ್‌ವಿನ ಚಿಹ್ನೆಗಳನ್ನಾಗಲಿ, ನಿಷಿದ್ಧಮಾಸವನ್ನಾಗಲಿ ಅಗೌರವ ಮಾಡಬೇಡಿ"** ಎಂದು ಇದೆ. **ಹಾಗೇ (22–32) "ಅಲ್ಲಾಹ್ ಚಿಹ್ನೆಗಳನ್ನು ಯಾರಾದರೂ ಗೌರವಿಸುತ್ತಿದ್ದಾರೆಂದರೆ ಅದು ಅವರ ಹೃದಯಗಳಲ್ಲಿನ ಭಕ್ತಿ ಭಾವನೆಗಳಿಂದಲೆ ಸುಮಾ!"** ಖುರಾನ್ ಗ್ರಂಥದಲ್ಲಿ ಎರಡು ಕಡೆ ದೇವರ ಚಿಹ್ನೆಯನ್ನು ಕುರಿತು ಹೇಳಿದ್ದರೂ ಅದು ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಅವರಿಗೆ ಅರ್ಥವಾಗಲಿಲ್ಲವೆಂಬ ವಿಷಯವನ್ನು ಅವರು ಈ ಎರಡು ವಾಕ್ಯಗಳಿಗು ಬರೆದ ವಿವರವನ್ನು ನೋಡಿದರೆ ತಿಳಿದುಹೋಗುತ್ತದೆ. ("ಅಂತಿಮ ದೈವ ಗ್ರಂಥ ಖುರ್‌ಆನ್" ಎಂಬ ಗ್ರಂಥದಿಂದ ಶೇಖರಿಸಿದ ವಿವರವನ್ನು ಇಲ್ಲಿ ಹೊಂದಿಸುತ್ತಿದ್ದೇವೆ.)

**(5–2) ವಿವರಣೆ :–** ಅರಬ್ಬೀ ಭಾಷೆಯಲ್ಲಿ "ಷಆಯಿರ್" ಎಂದು ಇದೆ. ಇದು 'ಷಯೀರತುನ್'ಗೆ ಬಹುವಚನ. 'ಷಆಯಿರ್' ಎಂದರೆ ಚಿಹ್ನೆಗಳು, ಸೂಚನೆಗಳು ಎಂದು ಅರ್ಥ. ದೇವರು ಯಾವ ಯಾವ ವಸ್ತುಗಳನ್ನು ಭಕ್ತಿಗೆ ಪವಿತ್ರತಗೆ ಸೂಚನೆಗಳಾಗಿ ಮಾಡಿದ್ದಾನೋ ಅವುಗಳನ್ನು ದೇವರ ಚಿಹ್ನೆಗಳಾಗಿ ಪರಿಗಣಿಸುತ್ತಾರೆ. ಕೆಲವು ಮಂದಿ ವಿದ್ವಾಂಸರು ಈ ಪದವನ್ನು ಸರ್ವಸಾಧಾರಣ ಭಾವದಿಂದ ತೆಗೆದುಕೊಂಡಾಗ, ಮತ್ತು ಕೆಲವು ಮಂದಿ ಹಜ್, ಉಮ್ರಗಳಿಗೆ ಪರಿಮಿತಿ ಮಾಡಿದ್ದಾರೆ. ಅಂದರೆ ಹಜ್, ಉಮ್ರಾ ಯಾತ್ರೆಗಳಲ್ಲಿ ಮಾಡಬೇಕಾದ ಕೆಲಸಗಳು. ಹಾಗೆಯೇ ಹಜ್ ಉಮ್ರಾಗಳ ಸಂಕಲ್ಪದಿಂದ ದೈವಗೃಹದ ಕಡೆಗೆ ಸಾಗಿ ಹೋಗುವವರನ್ನು ತಡೆಯುವುದೂ ಸಹ ದೇವರ ಚಿಹ್ನೆಗಳನ್ನು ಅಗೌರವಪಡಿಸುವುದರ ಕೆಳಗೆ ಬರುತ್ತದೆ. (ಈಗ 22–32 ಆಯತ್‌ಗೆ ಇರುವ ವಿವರವನ್ನು ನೋಡೋಣ) 'ಷಆಯಿರ್' ಅಂದರೆ ಗುರುತುಗಳು, ಚಿಹ್ನೆಗಳು

ಎಂದು ಅರ್ಥ. 'ಸಂಕೇತ' ಎಂದು ಸಹ ಒಂದು ಅರ್ಥ ಬರುತ್ತದೆ. ಯುದ್ಧಗಳ, ಸೈನಿಕ ಚರ್ಯೆಗಳಿಗಾಗಿ ಸಹ ಕೆಲವು ಸಂಕೇತ ಪದಗಳನ್ನು ಉಪಯೋಗಿಸುತ್ತಾರೆ. ಆ ಕೋಡ್‌ನ್ನು (ಗುರುತನ್ನು) ಸಂಬಂಧಿತ ವ್ಯಕ್ತಿಗಳು ಮಾತ್ರವೇ ಗ್ರಹಿಸುತ್ತಾರೆ. ಹಾಗೇ ದೇವರ ಚಿಹ್ನೆಗಳು ಎಂದರೇ ಇಸ್ಲಾಮ್ ಧರ್ಮವೈಶಿಷ್ಟ್ಯವನ್ನು, ಪ್ರತ್ಯೇಕತೆಯನ್ನು ಸಾರುವ ಆದೇಶಗಳು. ಅವುಗಳಿಂದ ಒಬ್ಬ ಮುಸ್ಲಿಮ್ ಬಾಹ್ಯ ಪ್ರಪಂಚದಲ್ಲಿ ತನ್ನ ವ್ಯಕ್ತಿತ್ವವನ್ನು, ವೈಶಿಷ್ಟ್ಯವನ್ನು ಸಾರಿ ಹೇಳುತ್ತಾನೆ. ಇತರ ಮತಗಳಿಂದ ಆ ಚಿಹ್ನೆಗಳು ಆತನನ್ನು ಸ್ಪಷ್ಟವಾಗಿ ಬೇರೆ ಮಾಡುತ್ತವೆ. ಮಕ್ಕಾದಲ್ಲಿನ ಸಫಾ, ಮರ್ವಾ ಪರ್ವತಗಳು ಸಹ ದೇವರ ಚಿಹ್ನೆಗಳಾಗಿ ಖರಾರು ಮಾಡಲಾಗಿವೆ. ಏಕೆಂದರೇ ಮುಸ್ಲಿಮ್‌ರು ಹಜ್, ಉಮ್ರಾಗಳ ಸಂದರ್ಭವಾಗಿ ಈ ಎರಡು ಗುಡ್ಡಗಳ ಮಧ್ಯೆ 'ಸಯೀ' ಮಾಡುತ್ತಾರೆ. ಈ ಆಯತ್‌ನಲ್ಲಿ ಹಜ್‌ನಲ್ಲಿನ ಇತರ ಕ್ರಿಯೆಗಳು ಸಹ ದೈವ ಚಿಹ್ನೆಗಳಾಗಿ ಹೇಳಿದ್ದಾರೆ. ಮುಖ್ಯವಾಗಿ ಖುರ್ಬಾನಿ ಪಶುಗಳು ದೈವಚಿಹ್ನೆಗಳಾಗಿ ವರ್ಣಿಸಲಾಗಿವೆ. ಅವುಗಳನ್ನು ಗೌರವಿಸುವುದು ಅಂದರೆ ಅರ್ಥ ಏನು? ಬಲಿಷ್ಟವಾದ ಯಾವ ಲೋಪವಿಲ್ಲದ ಪಶುಗಳನ್ನು ಖುರ್ಬಾನಿ ಕೊಡುವುದು. ಈ ತ್ಯಾಗ (ಖುರ್ಬಾನಿ) ಭಯಭಕ್ತಿಗಳಿಗೆ ನಮೂನೆಯಂತೆ ಹೇಳಲಾಗಿವೆ. ಭಯ ಭಕ್ತಿ (ತಖ್ವಾ) ಎನ್ನುವುದು ಆಂತರ್ಯ ದಿಂದ ಮಾಡಲ್ಪಟ್ಟಿರುವ ವಿಷಯ, ಅದು ಮೇಲ್ನೋಟಕ್ಕೆ ಕಾಣಿಸುವುದಿಲ್ಲ. ಆಂತರ್ಯ ಎಷ್ಟು ನಿರ್ಮಲವಾಗಿ ಪ್ರಕಾಶಮಾನವಾಗಿ ಇರುತ್ತದೋ ಆರಾಧನೆಯೂ ಸಹ ಅಷ್ಟೇ ಸ್ವಚ್ಛವಾಗಿ, ಶ್ರೇಷ್ಠವಾಗಿ ಇರುತ್ತದೆ.

ಈ ರೀತಿ ದೇವರ ಚಿಹ್ನೆಯನ್ನು ಕುರಿತು ಎಷ್ಟೋ ಜನರು ಎಷ್ಟೋ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಖಚಿತವಾಗಿ ಯಾರೂ ಹೇಳಲು ಸಾಧ್ಯವಿಲ್ಲ. ಕೆಲವರು ತಮ್ಮ ಇಷ್ಟ ಬಂದಂತೆ ಹೇಳಿದ್ದಾರೆ. ಇದೆಲ್ಲಾ ನೋಡಿದ ನಂತರ ಒಂದು ಗಾದೆಮಾತು ನೆನಪಿಗೆ ಬರುತ್ತದೆ. ಅದೇನೆಂದರೇ 'ಹದ್ದೂ ಪದ್ದೂ ಇಲ್ಲದವನಿಗೆ ಕಾಣಿಸಿದ ಕಡೆಯೆಲ್ಲಾ ಹಾಸಿಗೆ ಸ್ಥಳವೇ" ಎನ್ನುವಂತಿದೆ. ದೇವರ ಜ್ಞಾನವೆಲ್ಲವೂ ಶಾಸ್ತ್ರಬದ್ಧತೆಯೊಂದಿಗೆ ಕೂಡಿಕೊಂಡಿರುವಾಗ, ಎಷ್ಟೋ

ದೊಡ್ಡದಾದ ದೇವರ ಗುರುತನ್ನು ಯಾವಮಾತ್ರ ಶಾಸ್ತ್ರೀಯತೆ ಇಲ್ಲದೇ, ಯಾರ ಇಷ್ಟಬಂದಂತೆ ಅವರು ಹೋಲಿಸಿಕೊಳ್ಳುವುದು ಸರಿಯೇನಾ? ದೇವರು ಒಪ್ಪಿಕೊಳ್ಳುತ್ತಾನಾ? ಎಂದು ಕೇಳುತ್ತಿದ್ದೇವೆ. ದೇವರ ಚಿಹ್ನೆ ಧರ್ಮದೊಂದಿಗೆ ಕೂಡಿಕೊಂಡಿದೆ ಎನ್ನುವುದು ನ್ಯಾಯವಾಗುತ್ತದೆ.

ಒಂದು ಮತವನ್ನು ಸೂಚಿಸುವುದು ದೇವರ ಚಿಹ್ನೆ ಎನ್ನುವುದು ಪೂರ್ತಿ ಅಜ್ಞಾನವಾಗುತ್ತದೆ. ಮತಗಳಿಗೆ ಅತೀತವಾಗಿರುವುದು ದೇವರ ಚಿಹ್ನೆಯಾದಾಗ ಅದನ್ನು ಒಂದು ಮತಕ್ಕೆ ಅಂಟಿಸುವುದು ಅಜ್ಞಾನವಾಗದೇ ಏನಾಗುತ್ತದೆ. ಅಷ್ಟೇ ಅಲ್ಲದೆ ಖುರ್ಬಾನಿ ಪಶುಗಳನ್ನು ದೇವರ ಚಿಹ್ನೆಗಳಾಗಿ ಭಾವಿಸುವುದು ದೇವರನ್ನು, ದೇವರ ಚಿಹ್ನೆಯನ್ನು ಪೂರ್ತಿ ಅಗೌರವಪಡಿಸಿದಂತೇ ಆಗುತ್ತದೆ. ಬಲಿತ ಪಶುಗಳನ್ನು ದೇವರಿಗೆ ಖುರ್ಬಾನಿ ಕೊಟ್ಟರೇ ದೇವರ ಚಿಹ್ನೆಯನ್ನು ಗೌರವಿಸಿದಂತೆ ಎಂದು, ತೆಲುವಾಗಿ ಬಲಹೀನ ಪಶುಗಳನ್ನು ಅರ್ಪಿಸುವುದು (ಬಲಿ ಕೊಡುವುದನ್ನು) ದೇವರ ಚಿಹ್ನವನ್ನು ಅಗೌರವ ಪಡಿಸಿದಂತೆ ಎಂದು ಹೇಳುವುದು ಇನ್ನೂ ವಿಚಿತ್ರವಾಗಿ ಇದೆ. ಜ್ಞಾನ ತಿಳಿಯದವರು ತಿಳಿಯದಂತಿರುವುದು ಒಳ್ಳೆಯದೇ ಆದರೆ, ಜ್ಞಾನವನ್ನು ವಕ್ರಮಾರ್ಗದಲ್ಲಿ ಹೇಳುವುದು ದೇವರನ್ನು ಕೀಳಾಗಿನೋಡಿದಂತಾಗುತ್ತದೆ. ದೇವರು ಸರ್ವದರ್ಶಿ, ಆತನು ಎಲ್ಲವನ್ನೂ ಎಲ್ಲರನ್ನೂ ಗಮನಿಸುತ್ತಿರುತ್ತಾನೆ.

ದೇವರ ಗುರುತು ದೇವರ ಜ್ಞಾನವನ್ನು ತಿಳಿಸುವುದಾಗಿ ಇರುತ್ತದೆ. **ದೇವರ ಜ್ಞಾನದೊಂದಿಗೆ ಸಮಾನವಾಗಿರುವುದು ದೇವರ ಚಿಹ್ನೆ**. ದೇವರು ತನ್ನ ಗ್ರಂಥದಲ್ಲಿ ತನ್ನ ಗುರುತನ್ನು ಕುರಿತು ಹೇಳುತ್ತಾ ತನ್ನ ಗುರುತನ್ನು ಅಗೌರವಪಡಿಸಬಾರದೆಂದಿದ್ದಾರೆ. ಅಷ್ಟೇ ಹೊರತು ತನ್ನ ಗುರುತು ಇಂತಹದೆಂದು ಬಿಡಿಮಾಡಿ ಹೇಳಲಿಲ್ಲ. ದೇವರು ತನ್ನ ಗುರುತು ಇಂತಹದೆಂದು ಹೇಳದಿದ್ದರೂ, ಮನುಷ್ಯ ದೇವರ ಗುರುತನ್ನು ಅನೇಕ ವಿಧಗಳಾಗಿ ಹೋಲಿಸಿಕೊಳ್ಳುವುದು ನಡೆದಿದೆ. ನಾವು ಹೋಲಿಸಿಕೊಂಡಿರುವುದು ಅಸಲು ದೇವರ ಗುರುತೇನಾ! ಎಂದು ಸ್ವಲ್ಪವೂ ಆಲೋಚಿಸದಂತೆ ಮನುಷ್ಯ ನಿರ್ಣಯಿಸಿಕೊಳ್ಳುವುದು ಮನುಷ್ಯನ

ತಪ್ಪಾಗುತ್ತದೆ. ದೇವರು ತನ್ನ ಗುರುತನ್ನು ಕುರಿತು ಹೇಳಿದ್ದಾನೆ ಎಂದರೆ ಅದು ದೇವರ ಜ್ಞಾನದಿಂದ ಕೂಡಿಕೊಂಡಿರುವುದಾಗಿ, ದೇವರ ಬೆಲೆಯೊಂದಿಗೆ ಸಮಾನವಾಗಿ ಇರುತ್ತದೆಂದು ಮನುಷ್ಯ ಸ್ವಲ್ಪವೂ ಗ್ರಹಿಸಲಾರದೆ ಹೋಗಿದ್ದಾನೆ. ದೇವರು ಸರ್ವರಿಗೂ ಸಂಬಂಧಿಸಿದವನು. ಸರ್ವ ಮಾನವರಿಗೂ ಸಂಬಂಧಿಸಿದ ಬೋಧೆಯನ್ನು ಜ್ಞಾನವಾಗಿ ಹೇಳಿದವನಾಗಿ ಇದ್ದಾನೆ. ಅಂತಹವನನ್ನು ಒಂದು ಮತಕ್ಕೆ ಸಂಬಂಧಿಸಿ ಹೇಳುವುದು ದೊಡ್ಡ ಅಪರಾಧ.

ದೈವಗ್ರಂಥಗಳಲ್ಲಿ ದೇವರ ಜ್ಞಾನದಿಂದ ಏರ್ಪಟ್ಟಿರುವುದೇ ದೇವರ ಚಿಹ್ನೆ ಎಂದು ತಿಳಿಯುತ್ತಿದೆ. ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ ಕೊನೆಯ ಮೂರು ಶ್ಲೋಕಗಳಾದ 26, 27, 28 ಶ್ಲೋಕಗಳಲ್ಲಿ ದೇವರ ಚಿಹ್ನೆಯನ್ನು ಕುರಿತು ಹೇಳುವುದು ನಡೆದಿದೆ. ಅಲ್ಲಿ ಹೇಳಿದ ಜ್ಞಾನವನ್ನು ಸ್ಥೂಲ ಚಿಹ್ನವಾಗಿ ನೋಡಿಕೊಳ್ಳಬಹುದು. 26, 27 ಶ್ಲೋಕಗಳಲ್ಲಿನ ಜ್ಞಾನ ದೇವರ ಗುರುತಿಗೆ ನಾಂದಿ ಎಂದು ತಿಳಿಸುತ್ತಿದೆ. **28ನೇ ಶ್ಲೋಕದಲ್ಲಿ ಅದನ್ನು ತಿಳಿದವನು "ವೇದ, ದಾನ, ಯಜ್ಞ, ತಪಸ್ಸುಗಳನ್ನು ಮೀರಿದ ಯೋಗಿಯಾಗಿ, ಮೋಕ್ಷವನ್ನು ಹೊಂದುವನು"** ಎಂದು ಇದೆ. ಯಾವುದನ್ನು ತಿಳಿದರೆ ಮೋಕ್ಷವನ್ನು ಹೊಂದಬಹುದೆಂದು ಹೇಳಿದ್ದಾನೋ ಸ್ವಲ್ಪ ಯೋಚಿಸಿದರೇ ಅದೇ ದೇವರ ಗುರುತೆಂದು ತಿಳಿಯುತ್ತದೆ. ಅದೇ ರೀತಿ ದ್ವಿತೀಯ ದೈವಗ್ರಂಥವಾದ ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆ 14ನೇ ಅಧ್ಯಾಯದಲ್ಲಿ 6ನೇ ವಾಕ್ಯದಲ್ಲಿ **(4–14–6) ಯೇಸು "ನಾನೇ ಮಾರ್ಗವೂ, ಸತ್ಯವೂ, ಜೀವವೂ, ನನ್ನಿಂದ ಹೊರತು ಯಾರೂ ತಂದೆ ಹತ್ತಿರಕ್ಕೆ ಬರುವುದಿಲ್ಲ" (7) "ನೀವು ನನ್ನನ್ನು ತಿಳಿದಿದ್ದರೆ ನನ್ನ ತಂದೆಯನ್ನು ತಿಳಿದಿರುತ್ತೀರಿ. ಇಂದಿನಿಂದ ನೀವು ಆತನನ್ನು ತಿಳಿಯುತ್ತೀರ, ಆತನನ್ನು ನೋಡಿದ್ದೀರೆಂದು ಹೇಳಿದನು"** ಈ ಎರಡು ವಾಕ್ಯಗಳಲ್ಲಿಯೂ ದೇವರ ಗುರುತಿಗೆ ಸಂಬಂಧಿಸಿದ ಜ್ಞಾನವಿದೆ. ದೇವರ ಜ್ಞಾನ ಸೂಕ್ಷ್ಮವಾಗಿದ್ದರೂ, ಅದೇ ಜ್ಞಾನವೇ ಸ್ಥೂಲವಾಗಿ ತಯಾರಾದರೇ ದೇವರ ಗುರುತಾಗಿ ಬದಲಾಗುತ್ತದೆ. ಹಾಗೆ ತಯಾರಾದ ದೇವರ ಚಿಹ್ನೆ ದೇವರ ಜ್ಞಾನದಿಂದ ಕೂಡಿಕೊಂಡಿರುತ್ತ

ದಾಗಲಿ, ಮನುಷ್ಯರ ಮತಗಳಿಗೆ ಸಂಬಂಧಿಸಿದಂತೆ ಇರುವುದಿಲ್ಲ. ಬೈಬಲ್‌ನಲ್ಲಿ ಹೇಳಿದ ದೇವರ ಗುರುತು, ಭಗವದ್ಗೀತೆಯಲ್ಲಿ ಹೇಳಿದ ದೇವರ ಗುರುತು, ಖುರ್‌ಆನ್‌ನಲ್ಲಿ ಹೇಳಿದ ದೇವರ ಗುರುತು ಮೂರು ಒಂದೇ ಜ್ಞಾನದಿಂದ ಕೂಡಿಕೊಂಡು ಇರುವುದರಿಂದ ದೇವರ ಚಿಹ್ನೆ ಒಂದೇ ಆಕಾರವಾದ ಗುರುತಾಗಿ ಇದೆ. ಮೂರು ಗ್ರಂಥಗಳಲ್ಲಿ ಹೇಳಿದ ಜ್ಞಾನ ಒಂದೇ ಗುರುತಲ್ಲಿ ಕಾಣಿಸುವುದರಿಂದ, ಅದೇ ದೇವರ ಗುರುತಾಗಿ ದೇವರು ಹೇಳಿದಂತೆ ತಿಳಿಯುತ್ತದೆ.

ಈಗ ಕೆಲವರಲ್ಲಿ ಒಂದು ಪ್ರಶ್ನೆ ಹುಟ್ಟಬಹುದು. ಅದೇನೆಂದರೇ ದೇವರ ಗುರುತು ಒಂದಾ ಅಥವಾ ಹಲವಾ? ದೇವರ ಗುರುತು ಏಕವಚನವಾ, ಬಹುವಚನವಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ದೇವರು ಒಬ್ಬನೇ ಆದರೂ ದೇವರನ್ನು ಗೌರವಾರ್ಥವಾಗಿ ಬಹುವಚನ ವಾಗಿಯೇ ಕರೆಯಬಹುದು. ದೇವರು ಒಬ್ಬನೇ ಆದರೂ ಆತನು ಎಲ್ಲಾ ಕಡೆ ಇದ್ದಾನೆ ಎಂದು ಹೇಳಬಹುದು. ಅಷ್ಟೇ ಅಲ್ಲದೆ ದೇವರನ್ನು ಸ್ತ್ರೀಲಿಂಗವಾಗಿ ಆದರೂ ಹೇಳಬಹುದು, ಪುಲಿಂಗವಾಗಿ ಆದರೂ ಹೇಳಬಹುದು. ಹಾಗೆ ಹೇಳುವುದಕ್ಕೆ ಕಾರಣ ದೇವರನ್ನು ಸ್ತ್ರೀಲಿಂಗಕ್ಕಾಗಲೀ, ಪುಲಿಂಗಕ್ಕಾಗಲೀ, ಏಕವಚನಕ್ಕಾಗಲೀ, ಬಹುವಚನಕ್ಕಾಗಲೀ ಪರಿಮಿತಿ ಮಾಡಿ ಹೇಳಲಾರೆವು. ಆತನು ಎಲ್ಲದಕ್ಕೂ ಅತೀತನು. ಆದ್ದರಿಂದ ದೇವರನ್ನು ಇಂತಹವನೆಂದು ಯಾರೂ ನಿರ್ಣಯಿಸುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ದೇವರನ್ನು ಎಲ್ಲ ವಿಧಗಳಲ್ಲಿ ಹೇಳಬಹುದು.

ದೇವರ ಗುರುತು ಅಥವಾ ದೇವರ ಚಿಹ್ನೆ ಎಂಬ ವಿಷಯ ಈ ದಿನ ಆಧ್ಯಾತ್ಮಿಕ ವಿದ್ಯೆಯಲ್ಲಿ ಬಹಳ ಹೊಸದಾಗಿ ಕಾಣಿಸುತ್ತಿದೆ. ದೇವರ ಚಿಹ್ನೆಯನ್ನು ಕುರಿತು ದೇವರು ತನ್ನ ಗ್ರಂಥಗಳಲ್ಲಿ ಪೂರ್ವದಿಂದ ಹೇಳುತ್ತಿದ್ದರೂ, ಅದನ್ನು ಯಾರೂ ಗ್ರಹಿಸಲಾರದೇ ಹೋಗುವುದರಿಂದ, ಈಗ ನಾವು ಈ ವಿಷಯವನ್ನು ಹೇಳಿದರೆ ಎಲ್ಲರಿಗೂ ಹೊಸದಾಗಿ ಕಾಣಿಸುತ್ತಿದೆ. ಆದ್ದರಿಂದ ಬಹಳ ಜನರಿಗೆ ಬಹಳ ಸಂಶಯಗಳು ಈ ದೇವರ ಚಿಹ್ನೆಯನ್ನು ಕುರಿತು ಇವೆ. ಅವರ

ಸಂಶಯಗಳನ್ನು ಪ್ರಶ್ನೆಗಳ ರೂಪವಾಗಿ ಕೇಳಿದರೆ ಅನೇಕ ವಿಧಗಳಾಗಿ ಕಾಣಿಸುತ್ತವೆ. ಅವುಗಳಿಗೆ ಸರಿಯಾದ ರೀತಿಯಲ್ಲಿ ಉತ್ತರಗಳನ್ನು ಸಹ ನೋಡಬಹುದು.

**ಪ್ರಶ್ನೆ :– ಮೂರು ದೈವಗ್ರಂಥಗಳಲ್ಲಿ ದೇವರ ಸಾಕಾರ ಗುರುತು ಇರುವಾಗ, ಅದು ಯಾವ ಮತಕ್ಕೆ ಸಂಬಂಧಿಸಿರುವುದೆಂದು ಹೇಳಬೇಕು?**

**ಉತ್ತರ :–** ಮೂರು ದೈವಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವೇ ಇದೆಯೇ ಹೊರತು ಬೇರೆ ಏನೂ ಇಲ್ಲ. ದೇವರು ಯಾವ ಮತದವನೋ ಯಾರಾದರೂ ಹೇಳಬಲ್ಲಿರಾ? ಹೇಳುವುದಕ್ಕೆ ಅವಕಾಶವಿಲ್ಲ. ಏಕೆಂದರೇ! ದೇವರು ತನ್ನ ಜ್ಞಾನದಲ್ಲಿ ಎಲ್ಲೂ ಯಾವ ಮತವನ್ನು ಕುರಿತು ಹೇಳಲಿಲ್ಲ. ದೇವರು ಹೇಳಿದ ಜ್ಞಾನವೆಲ್ಲವೂ ಮನುಷ್ಯನಿಗೆ ಸಂಬಂಧಿಸಿರುವುದಾಗಿ ಇದೆ ಆದರೆ, ಮತಕ್ಕೆ ಸಂಬಂಧಿಸಿರುವುದಾಗಿ ಇಲ್ಲ. ದೇವರಾಗಲೀ, ದೇವರ ಜ್ಞಾನವಾಗಲೀ ಯಾವ ಮತಕ್ಕೂ ಸಂಬಂಧ ಇಲ್ಲದಿರುವಾಗ ದೇವರ ಗುರುತನ್ನು ಒಂದೇ ಮತಕ್ಕೆ ಸಂಬಂಧಿಸಿದಾಗಿರುವುದೆಂದು ಹೇಳುವುದಕ್ಕೆ ಅವಕಾಶವಿಲ್ಲ. ದೇವರು ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ಭೂಮಿ ಮೇಲೆ ಪ್ರಜೆಗಳಿಗೆ ತಿಳಿಸುವೆನೆಂದು ಅಂತಿಮ ದೈವಗ್ರಂಥವಾದ "ಖುರ್‌ಆನ್"ನಲ್ಲಿ 42ನೇ ಸೂರಾ 51ನೇ ಆಯತ್‌ನಲ್ಲಿ ಹೇಳಿದ್ದಾನೆ. ಅದೇ ರೀತಿ ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡದಂತೆ, ಕಾಲಾನುಗುಣವಾಗಿ ನಮಗೆ ತಿಳಿಸಿ ಮೂರು ಕಡೆ ತನ್ನ ಬೋಧೆಯನ್ನು ತಿಳಿಸಿದ್ದಾನೆ ಎಂದು ತಿಳಿಯುತ್ತಿದೆ. ದೇವರು ಯಾವಾಗ ಎಲ್ಲಿ ತನ್ನ ಬೋಧೆಯನ್ನು ತಿಳಿಸಿದರೂ ಅದು ಸರ್ವಜೀವರಾಶಿಗಳಿಗೂ ಸಂಬಂಧಿ ಸಿರುವುದಾಗಿಯೇ ಇದೆ. ಆದರೇ ಅದನ್ನು ಕೇಳಿದ ಮನುಷ್ಯ ದೇವರ ಜ್ಞಾನಕ್ಕೆ ಮತ ಎಂಬ ಬಣ್ಣ ಬಳೆದು, ತನ್ನ ಸ್ವಾರ್ಥದಿಂದ ಮತಗಳನ್ನು ತಯಾರು ಮಾಡಿಕೊಂಡಿದ್ದಾನೆ. ಮನುಷ್ಯರ ಅಜ್ಞಾನದಿಂದ ಹಲವು ಮತಗಳು ತಯಾರಾಗಿವೆ. ದೇವರು ಮೂರು ಸಮಯಗಳಲ್ಲಿ ಕೊಟ್ಟಿರುವ ಮೂರು ದೈವಗ್ರಂಥಗಳಿಗೆ ಮೂರು ಮತಗಳನ್ನು ಮನುಷ್ಯ ಆಪಾದಿಸಿದ್ದಾನೆ. ಅದರ ಪ್ರಕಾರ ಭಗವದ್ಗೀತೆ ಹಿಂದೂಗಳದೆಂದು, ಬೈಬಲ್ ಕ್ರೈಸ್ತರದೆಂದು, ಖುರಾನ್ ಮುಸ್ಲಿಮ್‌ರದೆಂದು

ಹೇಳುತ್ತಿದ್ದಾರೆ. ವಾಸ್ತವವಾಗಿ **ಮೂರು ದೈವಗ್ರಂಥಗಳಿಗೂ ಮೂರು ಮತಗಳಿಗೂ ಸ್ವಲ್ಪವೂ ಸಂಬಂಧವಿಲ್ಲ.** ಆದ್ದರಿಂದ ಮೂರು ಗ್ರಂಥಗಳಲ್ಲಿ ಹೇಳಿದ ದೇವರ ಚಿಹ್ನೆ ಮತಕ್ಕೆ ಸಂಬಂಧಪಟ್ಟಿರುವುದಲ್ಲವೆಂದು ಹೇಳಬಹುದು. ದೇವರು ಹೇಳಿರುವುದು ಸೂಕ್ಷ್ಮವಾದ ಜ್ಞಾನ. ಸೂಕ್ಷ್ಮವಾದ ಜ್ಞಾನದಲ್ಲಿಯೇ ಸ್ಥೂಲವಾದ ಗುರುತನ್ನು ಗುರುತಿಸಿಕೊಳ್ಳುವಂತೆ ದೇವರು ತನ್ನ ಬೋಧನೆಗಳನ್ನು ಸ್ವಲ್ಪ ತಿರುವು ತಿರುಗಿಸಿ ಹೇಳಿದ್ದಾನೆ. ದೇವರು ಹೇಳಿದ ಜ್ಞಾನವನ್ನನುಸರಿಸಿ ದೈವ ಚಿಹ್ನೆಯನ್ನು ನಾವು ತಯಾರು ಮಾಡಿಕೊಳ್ಳಬಹುದು. ದೇವರ ಚಿಹ್ನೆ ದೇವರ ಜ್ಞಾನದಿಂದ ತಯಾರಾಗಿದೆ ಆದ್ದರಿಂದ ಅದರಲ್ಲಿ ದೇವರ ಜ್ಞಾನ, ದೇವರ ಧರ್ಮಗಳು ಇರುತ್ತವೆ. ಅಷ್ಟೇ ಹೊರತು ದೇವರ ಗುರುತು ಪ್ರಾಪಂಚಿಕ ವಿಷಯಗಳ ಪ್ರತಿರೂಪವಲ್ಲ. ಕೆಲವರು ದೇವರ ಗುರುತನ್ನು ಅನೇಕ ವಿಧಗಳಾಗಿ ಪ್ರಪಂಚ ಸಂಬಂಧ ವಸ್ತುಗಳಿಗೆ, ಪ್ರಾಣಿಗಳಿಗೆ ಹೋಲಿಕೆ ಮಾಡಿರುವುದು ನಡೆದಿದೆ. ಕೊನೆಗೆ ದೇವರಿಗೆ ಬಲಿ ರೂಪದಲ್ಲಿ ಎಂದರೆ ಖುರ್ಬಾನಿ ರೂಪದಲ್ಲಿ ಕೊಡುವ ಪಶುಗಳನ್ನು ಸಹ ದೇವರ ಗುರುತುಗಳಾಗಿ ಹೇಳಿಕೊಳ್ಳುವುದು ನಡೆದಿದೆ. ಅಷ್ಟೇ ಅಲ್ಲದೆ ಬಲಹೀನವಾದ ಪಶುಗಳನ್ನು ದೇವರಿಗೆ ಬಲಿ ಕೊಟ್ಟರೇ ದೇವರ ಗುರುತನ್ನು ಅಗೌರವಪಡಿಸಿದಂತೆಂದು, ಬಲವಾದ ಬಲಿತ ಪಶುಗಳನ್ನು ದೇವರಿಗೆ ಸಮರ್ಪಿಸಿದರೇ ದೇವರ ಗುರುತನ್ನು ಗೌರವಿಸಿದಂತೆ ಎಂದು ಸಹ ಬರೆದಿದ್ದಾರೆ. ಕೊನೆಗೆ ದೇವರ ಗುರುತು ದೇವರ ಜ್ಞಾನಕ್ಕೆ ಸಂಬಂಧವಿಲ್ಲದಂತೆ ಮನುಷ್ಯ ಭಾವದಲ್ಲಿ ಪ್ರಪಂಚ ಸಂಬಂಧ ವಸ್ತುಗಳವರೆಗು, ಪದಾರ್ಥಗಳವರೆಗು, ಜಂತುಗಳವರೆಗು ಹೋಗಿದೆಯೆಂದರೇ ಮನುಷ್ಯರು ಎಷ್ಟು ಅಜ್ಞಾನದಲ್ಲಿ ಕೂರಿಕೊಂಡು ಹೋಗಿದ್ದಾರೋ ಹೇಳದೇ ತಿಳಿಯುತ್ತಿದೆ. ದೇವರು ಹೇಳಿದ ದೇವರ ಚಿಹ್ನೆ ದೇವರ ಜ್ಞಾನದಿಂದ ಕೂಡಿಕೊಂಡಿರುವುದಾಗಿ ದೇವರ ಜ್ಞಾನಕ್ಕೆ ಪ್ರತಿರೂಪವಾಗಿ ಇದೆಯೆಂದು ಹೇಳಬಹುದು. ಆದ್ದರಿಂದ ದೇವರ ಗುರುತು ಮತ ಸಂಬಂಧವಾಗಿರುವುದು ಅಲ್ಲವೆಂದು ತಿಳಿಯಬೇಕು.

**ಪ್ರಶ್ನೆ :– 'ಓಂ' ಎಂಬ ಗುರುತನ್ನು ನೋಡಿದರೇ ಹಿಂದೂಗಳು ನೆನಪಿಗೆ ಬರುತ್ತಾರೆ.**

**ಹಾಗೇ ಸಿಲುಬೆ ಗುರುತನ್ನು ನೋಡಿದರೇ ಕ್ರೈಸ್ತರು ಜ್ಞಾಪಕಕ್ಕೆ ಬರುತ್ತಾರೆ. ದೇವರ ಗುರುತನ್ನು ನೋಡಿ ಯಾರನ್ನು ಗುರುತಿಸಬಹುದು?**

**ಉತ್ತರ :–** 'ಓಂ' ಹಿಂದೂಗಳದೆಂದು, ಸಿಲುಬೆ ಕ್ರೈಸ್ತರದೆಂದು ಹೇಳಿಕೊಳ್ಳುವುದು ಮನುಷ್ಯರಿಗೆ ಅಭ್ಯಾಸವಾಗಿ ಹೋಗಿದೆ. ಇಲ್ಲಿ ಆ ಎರಡರ ವಿಷಯದಲ್ಲಿ ಸಹ ಮನುಷ್ಯನ ಬುದ್ಧಿ ಕಡಿಮೆಯಲ್ಲಿರುವ ಅಜ್ಞಾನ ಚೆನ್ನಾಗಿ ಕಾಣಿಸುತ್ತಿದೆ. ಪ್ರಪಂಚ ಸಂಬಂಧವಾಗಿ ಆಗಲೀ, ದೈವ ಸಂಬಂಧವಾಗಿ ಆಗಲೀ ಎಲ್ಲಿ ನೋಡಿದರೂ "ಓಂ" ಎಂಬ ಅಕ್ಷರ ಹಿಂದೂಗಳ ಜ್ಞಾನದಲ್ಲಿ ಒಂದು ಮುಖ್ಯವಾದ ಗುರುತಾಗಿ ಕಾಣಿಸುತ್ತಿದೆ. 'ಓಂ' ಎಂಬ ಶಬ್ದ ಸರ್ವಮಂತ್ರಗಳಿಗೆ ಮೊದಲ ಬೀಜಾಕ್ಷರವಾಗಿ ಇದೆ. ಆದ್ದರಿಂದ ಪ್ರತಿ ಮಂತ್ರದ ಹತ್ತಿರ 'ಓಂ' ಎಂಬ ಶಬ್ದವಿರುತ್ತದೆ. ಅಷ್ಟೇ ಅಲ್ಲದೆ ಭಗವದ್ಗೀತಾ ಗ್ರಂಥದಲ್ಲಿ ಸಹ ಅಕ್ಷರ ಪರಬ್ರಹ್ಮಯೋಗವೆಂಬ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ 'ಓಂ' ಪ್ರಣವಾಕ್ಷರವನ್ನು ಕುರಿತು ಹೇಳುವುದು ನಡೆದಿದೆ. ಆದ್ದರಿಂದ ಆಧ್ಯಾತ್ಮಿಕದಲ್ಲಿ ಓಂ ಎಂಬ ಅಕ್ಷರಕ್ಕೆ ಪ್ರಮುಖ ಸ್ಥಾನವಿದೆ. ಅಂದರೆ ಅದು ದೈವ ಜ್ಞಾನಕ್ಕೆ ಹತ್ತಿರವಾಗಿದೆಯೆಂದು ತಿಳಿಯುವುದರಿಂದ, ಅದನ್ನು ಹಿಂದೂಗಳು ಗುರುತಾಗಿ ಹೇಳಿಕೊಂಡರೂ ನಷ್ಟವೇನೂ ಇಲ್ಲ. ಅದು ದೈವಸಂಬಂಧ ಜ್ಞಾನದಿಂದ ಮುಡಿಪಟ್ಟಿರುವುದರಿಂದ ಅದನ್ನು ಹಿಂದೂಗಳ ಗುರುತೆಂದು ಹೇಳಿದರೂ ಅಜ್ಞಾನವೇ ಅಲ್ಲ. ಆದರೇ ಬೈಬಲ್‌ನಲ್ಲಿ ಸಿಲುಬೆ ಪ್ರಸ್ತಾವನೆ ಬಂದಿದ್ದರೂ, ಅದು ದೈವಜ್ಞಾನದಿಂದ ಎಂತಹ ಸಂಬಂಧವಿಲ್ಲದಂತೆ ಇದೆ. ಮೇಲಾಗಿ ಯೇಸು ಮರಣದಲ್ಲಿ ಪ್ರಮುಖಪಾತ್ರ ಇರುವಂತಹದ್ದಾಗಿ, ಯೇಸುವನ್ನು ಸಾಯಿಸುವುದರಲ್ಲಿ ಆಯುಧವಾಗಿ ಸಿಲುಬೆ ಇದೆ. ಯೇಸು ದೇವರೆಂದು ಹೇಳುವ ಕೆಲವರು ಕ್ರೈಸ್ತವರೂ ಇದ್ದಾರೆ. ಯೇಸು ದೇವರೆಂಬ ಭಾವವಿರುವಾಗ ಯೇಸು ಮರಣಕ್ಕೆ ಕಾರಣವಾದ, ಯೇಸು ಮರಣದಲ್ಲಿ ಉಪಯೋಗವಾದ ಮುಖ್ಯ ಆಯುಧವಾಗಿರುವ ಸಿಲುಬೆಯನ್ನು ಏಕೆ ಕ್ರೈಸ್ತರು ಗೌರವಿಸುತ್ತಿದ್ದಾರೆ. ಸಿಲುಬೆಯನ್ನು ಏಕೆ ಕ್ರೈಸ್ತರು ಗುರುತಾಗಿ ಇಟ್ಟುಕೊಂಡಿದ್ದಾರೆ? ಕೃಷ್ಣನು ಹೇಳಿದ ಜ್ಞಾನದಲ್ಲಿ ಓಂ ಎಂಬ ಅಕ್ಷರವಿದೆ. ಆದರೇ ಯೇಸು ಹೇಳಿದ

ಜ್ಞಾನದಲ್ಲಿ ಸಿಲುಬೆ ಇಲ್ಲ. ಬೈಬಲ್‌ನಲ್ಲಿ ಸಿಲುಬೆ ಪ್ರಸ್ತಾವನೆ ಬಂದರೂ ಅದು ಅಜ್ಞಾನದ ಕಡೆಯಿಂದ ಬಂದಿರುವುದೇ ಹೊರತು, ಜ್ಞಾನದ ಕಡೆಯಿಂದ ಬರಲಿಲ್ಲ. ಹಿಂದೂಗಳು "ಓಂ"ನ್ನು ತಮ್ಮ ಗುರುತಾಗಿ ಹೇಳಿಕೊಳ್ಳುವುದರಲ್ಲಿ ಅರ್ಥ ವಿದೆಯಾಗಲೀ, ಕ್ರೈಸ್ತರು ಸಿಲುಬೆಯನ್ನು ತಮ್ಮ ಗುರುತಾಗಿ ಹೇಳಿಕೊಳ್ಳುವುದರಲ್ಲಿ ಅರ್ಥವೇ ಇಲ್ಲ. ಇಲ್ಲಿ ಅಸಲು ವಿಷಯಕ್ಕೆ ಬಂದು ದೈವಗ್ರಂಥದಲ್ಲಿ ಹೇಳಿದ ದೇವರ ಚಿಹ್ನೆಯನ್ನು ನೋಡಿದರೇ ದೇವರ ಜ್ಞಾನವೇ ನೆನಪಿಗೆ ಬರುತ್ತದೆ. ಅಷ್ಟೇ ಹೊರತು ದೇವರ ಚಿಹ್ನೆಯನ್ನು ನೋಡಿದರೇ ಯಾವ ಮತ ನೆನಪಿಗೆ ಬರುವುದಿಲ್ಲ. ದೇವರ ಚಿಹ್ನೆ ದೇವರಿಗೂ, ದೇವರ ಜ್ಞಾನಕ್ಕೂ ಪ್ರತಿರೂಪವಾಗಿ ಇದೆಯಾಗಲೀ, ಅಜ್ಞಾನ ಸಂಬಂಧವಾದ ಯಾವುದಕ್ಕೂ ಗುರುತಾಗಿ ಇಲ್ಲವೆಂದು ತಿಳಿಯಬೇಕು.

**ಪ್ರಶ್ನೆ :– ಭಗವದ್ಗೀತೆಯಲ್ಲಿ ಹೇಳಿದ 'ಓಂ'ಗೂ ಆಕಾರವಿದೆ. ಹಾಗೇ ಬೈಬಲ್‌ನಲ್ಲಿ ಪ್ರಸ್ತಾವಿಸಲಾಗಿರುವ ಸಿಲುಬೆಗೂ ಆಕಾರವಿದೆ. ಆದರೇ ಭಗವದ್ಗೀತೆಯಲ್ಲಿ ಹೇಳಿದ ಓಂ ಬೈಬಿಲ್‌ನಲ್ಲಿ ಇಲ್ಲ. ಬೈಬಲ್‌ನಲ್ಲಿ ಹೇಳಿದ ಸಿಲುಬೆ ಭಗವದ್ಗೀತೆಯಲ್ಲಿ ಇಲ್ಲ. ಭಗವದ್ಗೀತೆ, ಬೈಬಲ್, ಖುರಾನ್‌ದ ಮೂರೂ ಗ್ರಂಥಗಳಲ್ಲಿ ಜ್ಞಾನರೂಪದಲ್ಲಿ ಇದೆಯೆಂಬ ದೇವರ ಗುರುತಿಗೆ ಸ್ಥೂಲವಾದ ಆಕಾರವಿದೆಯಾ?**

**ಉತ್ತರ :–** ಸ್ಥೂಲವಾದ ಆಕಾರವಿರುವಾಗಲೇ ಮನುಷ್ಯ ಕಣ್ಣಿನಿಂದ ನೋಡುತ್ತಿದ್ದಾನೆ. ಆಗಲೇ ಅದನ್ನು ಗುರುತಿಸಬಹುದು. ಗುರುತಿಸಿದಾಗಲೇ ಅದರ ಹಿಂದೆ ಅಡಗಿರುವ ಸಮಾಚಾರವೆಲ್ಲಾ ಜ್ಞಾಪಕಕ್ಕೆ ಬರುತ್ತದೆ. ಉದಾಹರಣೆಗೆ ಸ್ಥೂಲವಾಗಿ ಕಾಣಿಸುವ ಕರ್ಪೂರವನ್ನು ನೋಡಿದಾಗ, ಅದರ ಹಿಂದೆ ಅಡಗಿರುವ ಆರತಿ ಜ್ಞಾಪಕಕ್ಕೆ ಬರುತ್ತದೆ. ಹಾಗೇ ಆರತಿಯಲ್ಲಿ ಇರುವ ಜ್ಞಾನವೂ ಸಹ ನೆನಪಿಗೆ ಬರುತ್ತದೆ. ಅದೇ ರೀತಿ ದೈವ ಚಿಹ್ನೆಯನ್ನು ಆಕಾರ ರೂಪದಲ್ಲಿ ನೋಡಿದಾಗ, ಆ ಆಕಾರದಲ್ಲಿ ಮಿಳಿತವಾಗಿರುವ ಜ್ಞಾನವೆಲ್ಲವೂ ಜ್ಞಾಪಕಕ್ಕೆ ಬರುತ್ತದೆ.

**ಪ್ರಶ್ನೆ :– ಇದು ದೇವರ ಚಿಹ್ನೆ ಎಂದು ತಿಳಿದವನಿಗೆ ಅದರ ಹಿಂದೆ ಇರುವುದೇನೋ ಜ್ಞಾಪಕಕ್ಕೆ ಬರಬಹುದು. ಆದರೇ ದೇವರ ಚಿಹ್ನೆಯೆಂದರೇ ಏನೋ? ಅದು ಹೇಗಿರುತ್ತದೋ ತಿಳಿಯದವನು ಅದನ್ನು ನೋಡಿದರೂ ಏನೂ ಪ್ರಯೋಜನವಿಲ್ಲ ಅಲ್ಲವೇ! ಆತನಿಗೆ ಯಾವ ಜ್ಞಾನವು ಜ್ಞಾಪಕಕ್ಕೆ ಬರುವುದಿಲ್ಲವಲ್ಲವೇ!**

**ಉತ್ತರ :–** ದೇವರ ಗುರುತನ್ನು ಒಂದು ಬಾರಿ ನೋಡಿ ಅದರ ವಿವರ ತಿಳಿದಿರುವವನು ಎರಡನೆಯ ಬಾರಿ ನೋಡುವುದಾದರೇ ಅದರಿಂದ ಪ್ರಯೋಜನವಿರುತ್ತದೆ. ಒಂದು ಬಾರಿಯೂ ನೋಡದವನಿಗೆ ಅದರ ಹಿಂದೆ ಇರುವ ಸಮಾಚಾರ ಜ್ಞಾಪಕಕ್ಕೆ ಬರುವುದಿಲ್ಲ. ಆದರೇ ದೇವರ ಚಿಹ್ನೆಯನ್ನು ಹೊಸದಾಗಿ ನೋಡಿದ ಯಾರಿಗಾದರೂ ಅದನ್ನು ಕುರಿತು ತಿಳಿದುಕೊಳ್ಳಬೇಕೆಂಬ ಆಸಕ್ತಿ ತಪ್ಪದೇ ಹುಟ್ಟುತ್ತದೆ.

**ಪ್ರಶ್ನೆ :– ದೇವರಿಗೂ, ದೇವರ ಚಿಹ್ನೆಯಕ್ಕೂ ಏನು ವ್ಯತ್ಯಾಸವಿರುತ್ತದೆ?**

**ಉತ್ತರ :–** ದೇವರು ಕಾಣಿಸುವುದಿಲ್ಲ, ದೇವರ ಚಿಹ್ನೆ ಕಾಣಿಸುತ್ತದೆ.

**ಪ್ರಶ್ನೆ :– ದೇವರು ಕಾಣಿಸದೇ ಇರುವಾಗ ದೇವರ ಚಿಹ್ನೆ ಕಾಣಿಸಿದರೂ, ಇದೇ ದೇವರ ಚಿಹ್ನೆಯೆಂದು ಹೇಗೆ ತಿಳಿಯಬಹುದು? ದೇವರು ತನ್ನ ಚಿಹ್ನೆಯನ್ನು ಕುರಿತು ಸೂಚನೆಯ ಪ್ರಕಾರ ಖುರಾನ್ ಗ್ರಂಥದಲ್ಲಿ (5–2), (22–32) ಆಯತ್‌ಗಳಲ್ಲಿ ಚಿಹ್ನೆ ಎಂದು ಹೆಸರಿಟ್ಟಿದ್ದಾನಾಗಲೀ ತನ್ನ ಚಿಹ್ನೆ ಹೇಗಿರುತ್ತದೋ ಸಹ ಹೇಳಲಿಲ್ಲ. ಹಾಗಿರುವಾಗ ಯಾವುದು ದೇವರ ಚಿಹ್ನೆಯೆಂದು ಅಂದುಕೊಳ್ಳಬೇಕು?**

**ಉತ್ತರ :–** ರಾಜ ಎಂಬ ಹೆಸರನ್ನು ಕೇಳಿದ್ದೇವೆ, ಹಳೆ ಸಿನಿಮಾಗಳಲ್ಲಿ ರಾಜರನ್ನೂ ಸಹ ನೋಡಿದ್ದೇವೆ. ರಾಜನಿಂದ ನಿರ್ಣಯಿಸಲಾಗಿರುವ, ರಾಜನಿಗೆ ಗುರತಾಗಿ ನಿರ್ಣಯಿಸಲಾಗಿರುವುದನ್ನು ರಾಜಚಿಹ್ನೆ ಎನ್ನುತ್ತೇವೆ. ರಾಜನಿಗೆ ಎಷ್ಟು ಅಧಿಕಾರವಿರುತ್ತದೋ, ರಾಜ ಚಿಹ್ನಕ್ಕೂ ಸಹ ಅಷ್ಟೇ ಅಧಿಕಾರವಿರುತ್ತದೆ. ರಾಜ

ಎಲ್ಲೋ ಅಂತಃಪುರದಲ್ಲಿ ಕುಳಿತುಕೊಂಡು ರಾಜಚಿಹ್ನೆಯನ್ನು ಹೊರಗೆ ಕಳುಹಿಸಿ ತನ್ನ ಕೆಲಸಗಳನ್ನು ಮಾಡಿಸುತ್ತಿರುವನು. ರಾಜನಿಗೆ ಬದಲಾಗಿ ಅಥವಾ ರಾಜನಿಗೆ ಪ್ರತಿರೂಪವಾಗಿ ಇರುವುದನ್ನು 'ರಾಜಮುದ್ರೆ' ಅಥವಾ 'ರಾಜ ಚಿಹ್ನೆ' ಎನ್ನುತ್ತೇವೆ. ರಾಜಚಿಹ್ನೆ ರಾಜನ ಸ್ವಹಸ್ತಗಳಿಂದ ಇಟ್ಟಿರುವ ಸಹಿನೂ ಆಗಬಹುದು ಇಲ್ಲವೆ ಸ್ವಹಸ್ತಗಳಿಗೆ ಧರಿಸಿದ ಉಂಗರವೂ ಆಗಬಹುದು. ಒಂದು ರಾಜ್ಯದಲ್ಲಿ ರಾಜಚಿಹ್ನವಾಗಿ ನಿರ್ಣಯಿಸಲಾಗಿರುವುದು ಮತ್ತೆಲ್ಲೂ ಇರುವುದಕ್ಕೆ ಅವಕಾಶವಿಲ್ಲ. ಒಬ್ಬ ರಾಜನಿಗೆ ರಾಜಚಿಹ್ನೆ ಒಂದೇ ಇರುತ್ತದಾಗಲೀ, ಎರಡನೆಯದು ಇರುವುದಿಲ್ಲ. ಪೂರ್ವದಲ್ಲಿ ರಾಜಚಿಹ್ನವನ್ನು ತೆಗೆದುಕೊಂಡು ಹೋಗಿ ರಾಜ ಭಟರಿಗೆ ತೋರಿಸಿದರೇ, ಅದನ್ನು ರಾಜನೊಂದರ ಪ್ರತಿನಿಧಿಯಾಗಿ ಭಾವಿಸಿ, ಅಲ್ಲಿ ರಾಜು ಕಳುಹಿಸಿದ ಸಂದೇಶವನ್ನು ಈಡೇರಿಸುತ್ತಿದ್ದರು. ಉದಾಹರಣೆಗೆ ಕಾರಾಗೃಹದಿಂದ ಒಬ್ಬ ಖೈದಿಯನ್ನು ಹೊರಗೆ ತರುವುದಕ್ಕೆ ರಾಜನೇ ಬಂದು ಬಿಡುಗಡೆ ಮಾಡೆಂದು ಹೇಳಬೇಕಾದ ಅವಶ್ಯವಿಲ್ಲ. ರಾಜಮುದ್ರೆ ಎಂಬ ರಾಜನೊಂದರ ಗುರುತನ್ನು ತಂದು ತೋರಿಸಿ ವಿಷಯವನ್ನು ಹೇಳಿದರೇ ಅಲ್ಲಿ ರಾಜು ಹೇಳಿದಂತೇ ಕೆಲಸ ನಡೆಯುತ್ತಿತ್ತು. ರಾಜ ಅಲ್ಲದಿದ್ದರೂ ರಾಜನೊಂದಿಗೆ ಸಮಾನವಾದ ಅಧಿಕಾರವನ್ನು ತೋರಿಸುವುದನ್ನು ರಾಜಚಿಹ್ನೆ ಎನ್ನುತ್ತೇವೆ. ಚಿಹ್ನ ಎಂದರೇ 'ಗುರುತು' ಎಂದು ಅರ್ಥ. ಚಿಹ್ನೆಯನ್ನು ಇಲ್ಲವೆ ಗುರುತನ್ನು ಮುದ್ರೆ ಎಂದು ಸಹ ಎನ್ನಬಹುದು. ಮುದ್ರೆ ಎಂದರೆ ನಿರ್ಣಯಿಸಲಾಗಿರುವುದೆಂದು ಅರ್ಥ. ರಾಜ ಬೇರೆ, ರಾಜಮುದ್ರೆ (ಚಿಹ್ನೆ) ಬೇರೆಯಾದರೂ ರಾಜನಿಗೆ ಇರುವ ಅಧಿಕಾರ ರಾಜ ಚಿಹ್ನಕ್ಕೆ ಇರುತ್ತದೆ. ರಾಜನನ್ನು ಗೌರವಿಸಿದಂತೇ ರಾಜನೊಂದರ ಗುರುತನ್ನು ಸಹ ಗೌರವಿಸುತ್ತಾರೆ. ಅದೇ ರೀತಿ ದೇವರು ಬೇರೆ, ದೇವರ ಗುರುತು ಬೇರೆಯಾದರೂ ದೇವರಿಗಿರುವ ದೈವಶಕ್ತಿ ದೇವರ ಚಿಹ್ನೆಯಲ್ಲಿ ಸಹ ಇರುತ್ತದೆ. ರಾಜಮುದ್ರೆಯನ್ನು(ರಾಜ ಚಿಹ್ನೆಯನ್ನು) ರಾಜನೊಂದರ ಸೈನ್ಯ ಗೌರವಿಸಿದಂತೇ, ದೇವರ ಚಿಹ್ನೆಯನ್ನು ನೋಡಿ ದೇವದೂತರು, ಗ್ರಹಗಳು, ಭೂತಗಳು ಗೌರವಿಸುತ್ತಾರೆ. ರಾಜಮುದ್ರೆ ಪ್ರಜೆಗಳಿಗೆ ತಿಳಿಯದಿದ್ದರೂ, ರಾಜನ ಪಾಲನೆಯಲ್ಲಿನ ಪಾಲಕರೆಲ್ಲರಿಗೂ

ತಿಳಿದಂತೆ, ದೇವರ ಗುರುತು ಪ್ರಜೆಗಳಿಗೆ ತಿಳಿಯದೇ ಹೋದರೂ ದೇವರ ಪಾಲನೆಯಲ್ಲಿನ ಭೂತಗಳಿಗೂ, ಗ್ರಹಗಳಿಗೂ, ದೇವದೂತರೆನ್ನುವವರೆಲ್ಲರಿಗೂ ತಿಳಿಯುತ್ತದೆ. ಖುರಾನ್ ಗ್ರಂಥದಲ್ಲಿ ಎರಡು ಕಡೆ ದೇವರು ತನ್ನ ಚಿಹ್ನೆಯನ್ನು ಕುರಿತು ಹೇಳಿದ್ದಾನಾಗಲೀ ಅಲ್ಲಿ ಇಂತಹ ವಿಧವಾಗಿ ಇರುವುದೇ ತನ್ನ ಚಿಹ್ನೆಯೆಂದು ಹೇಳಲಿಲ್ಲ.

**ಪ್ರಶ್ನೆ :– ದೇವರನ್ನು ವಿವರಿಸಿ ಹೇಳದೇ ದೇವರ ಗುರುತು ಇಂತಹದೆಂದು ಹೇಗೆ ಗುರುತಿಸಬಹುದು?**

**ಉತ್ತರ :–** ಎಲ್ಲಾದರು ರಾಜನೊಂದಿಗೆ ಸಮಾನವಾಗಿ ಬೆಲೆಕೊಡುವ ಗುರುತು ಇದೆಯೋ, ಅದನ್ನೇ ರಾಜಮುದ್ರೆ ಎಂದು ಗ್ರಹಿಸಿದಂತೆ, ಎಲ್ಲಾದರೇ ಭೂತಗಳು, ಗ್ರಹಗಳು, ದೇವದೂತರು ದೇವರೊಂದಿಗೆ ಸಮಾನವಾಗಿ ಬೆಲೆಯನ್ನು ಕೊಡುವ ಗುರುತು ಇದೆಯೋ, ಯಾವುದನ್ನು ಅವರೆಲ್ಲರೂ ಗೌರವ ಭಾವದಿಂದ ನೋಡುತ್ತಿದ್ದಾರೋ ಅದೇ ದೇವರ ಗುರುತೆಂದು ತಿಳಿಯಬಹುದು. ದೇವರ ಗುರುತು ದೇವರ ಪಾಲನೆಯಲ್ಲಿನ ಎಲ್ಲರಿಗೂ ತಿಳಿದಿದೆ. ದೇವರ ಜ್ಞಾನವಿರುವವರಿಗೂ ಸಹ ದೇವರು ತನ್ನ ಗುರುತನ್ನು ಕುರಿತು ವಿವರಿಸಿ ಹೇಳಿರಬಹುದು. ಇಲ್ಲದೇ ಹೋದರೆ ಜ್ಞಾನಿ ಆದವನು ದೇವದೂತರಿಂದಾಗಲೀ, ಗ್ರಹಗಳಿಂದಾಗಲೀ, ಭೂತಗಳಿಂದಾಗಲೀ ತಿಳಿದಿರಬಹುದು. ನಮಗೆ ತಿಳಿಯದಷ್ಟು ಮಾತ್ರಕ್ಕೆ ಇತರರ್ಯಾರಿಗೂ ತಿಳಿಯದೆಂದುಕೊಳ್ಳುವುದು ತಪ್ಪಾಗುತ್ತದೆ. ನಮಗೆ ತಿಳಿಯದ ಜ್ಞಾನರಹಸ್ಯಗಳೆಷ್ಟೋ ಇತರರಿಗೂ ತಿಳಿದಿರಬಹದು. ತಿಳಿಯದ ವಿಷಯ ತಿಳಿದುಕೊಳ್ಳುವುದು ಮನುಷ್ಯನ ಕರ್ತವ್ಯ. ತಿಳಿದಿರುವ ವಿಷಯ ಶಾಸ್ತ್ರಬದ್ಧವಾಗಿರುವುದೋ ಅಲ್ಲವೋ ವಿಶದೀಕರಿಸಿ ನೋಡಿ ಶಾಸ್ತ್ರಬದ್ಧವಾಗಿರುವುದಾದರೇ, ಅದರಲ್ಲಿ ದೇವರು ಹೇಳಿದ ಶಕ್ತಿ ಇದ್ದರೇ, ಅದನ್ನು ದೇವರ ಗುರುತಾಗಿ ತಿಳಿಯುವುದರಲ್ಲಿ ತಪ್ಪಿಲ್ಲ ಅಲ್ಲವೆ!

**ಪ್ರಶ್ನೆ :– ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 22, ಆಯತ್**

**31ರಲ್ಲಿ ಹೀಗೆ ಇದೆ. "ಏಕಾಗ್ರತೆಯಿಂದ ದೇವರ ಏಕತ್ವವನ್ನು ಅನುಸರಿಸುತ್ತಾ ಆತನಿಗೆ ಸಾಟಿ ಕಲ್ಪಿಸದಂತೆ ಇರಬೇಕು. ಅಲ್ಲಾಹ್‌ಗೆ ಸಾಟಿ ಕಲ್ಪಿಸುವವನು ಆಕಾಶದಿಂದ ಕೆಳಗೆ ಬಿದ್ದು ಹೋದವನೊಂದಿಗೆ ಸಮಾನ. ಈಗ ಆತನನ್ನು ಪಕ್ಷಿಗಳಾದರೂ ಎಗರಿಸಿಕೊಂಡು ಹೋಗುತ್ತವೆ. ಇಲ್ಲಾ ಬಿರುಗಾಳಿ ಆದರೂ ಎತ್ತಿ ದೂರ ಪ್ರದೇಶದಲ್ಲಿ ಬಿಸಾಕುತ್ತದೆ." ಈ ರೀತಿ ದೇವರು ಜಿಬ್ರಯೇಲ್‌ನಿಂದ ಹೇಳಿಸಿದ್ದಾನಲ್ಲವೆ! ಹಾಗಿರುವಾಗ ಯಾರೂ ದೇವರಿಗೆ ಸಮಾನವಾಗಿ ಯಾವುದನ್ನೂ ಸಹ ಕಲ್ಪಿಸಬಾರದಲ್ಲವೆ! ಹಾಗಿರುವಾಗ ನೀವು ದೇವರ ಶಕ್ತಿಯೊಂದಿಗೆ ಸಮಾನವಾಗಿರುವುದು ದೇವರ ಗುರುತೆಂದು, ದೇವರ ಹುದ್ದೆಯಿಂದ ಸಮಾನ ವಾಗಿರುವುದು ದೇವರ ಚಿಹ್ನೆಯೆಂದು, ಪ್ರತ್ಯೇಕಿಸಿ ಒಂದು ಚಿಹ್ನೆಯನ್ನು ತೋರಿಸುವುದು ಇಲ್ಲವೆ ಇದೆಯೆಂದು ಹೇಳುವುದು ದೇವರ ಏಕತ್ವಕ್ಕೆ ಭಂಗ ಕಲುಗಿಸಿದಂತೆ ಅಲ್ಲವೆ! ಹಾಗಿರುವಾಗ ದೇವರ ಶಿಕ್ಷೆಗೆ ಪಾತ್ರರಾಗುತ್ತೀರಾಗಲೀ! ದೇವರು ಹೇಳಿದ (22–31) ವಾಕ್ಯ ತಿಳಿದು ದೇವರ ಗುರುತೆನ್ನುವುದು ತಪ್ಪಲ್ಲವೆ?**

**ಉತ್ತರ :–** ನಾವು ಅಲ್ಲಾ ಮಾತನ್ನು ಗೌರವಿಸುತ್ತೇವೆ. ದೈವ ಗ್ರಂಥದಲ್ಲಿನ ಯಾವ ಮಾತಿಗಾಗಲೀ ವಿರುದ್ಧವಾಗಿ ಹೇಳುವುದಾಗಲೀ, ನಡೆಯುವುದಾಗಲೀ ನಮ್ಮ ಜೀವನದೊಂದಿಗೆ ನಡೆಯುವುದಿಲ್ಲ. ಮೇಲಿನ ವಾಕ್ಯದಲ್ಲಿ ದೇವರಿಗೆ ಸಾಟಿಯಾಗಿ ಯಾವುದನ್ನಾಗಲೀ, ಯಾರನ್ನಾಗಲೀ ಹೇಳಬಾರದು. ಹಾಗೆ ಹೇಳುವವನು ಶಿಕ್ಷಾರ್ಹನೆಂದು ಇರುವುದು ಸತ್ಯವೇ. ದೇವರಿಗೆ ಸಮಾನವಾದ ಚಿಹ್ನೆಯನ್ನು ದೇವರೇ ಹೇಳಿದ್ದಾನಾಗಲೀ ಮನುಷ್ಯರಾದ ನಾವು ಹೇಳಲಿಲ್ಲವಲ್ಲವೆ! ಸೂರಾ 5, ಆಯತ್ 2ರಲ್ಲಿ ಈ ಆಯತ್‌ಗಿಂತ ಮೊದಲೇ ತನ್ನ ಚಿಹ್ನೆಯನ್ನು ಕುರಿತು ಹೇಳುವುದಾಗಿದೆ. ತದನಂತರ ಇಲ್ಲಿ ಸೂರಾ 22, ಆಯತ್‌ದಲ್ಲಿ 32ರಲ್ಲಿ ತನ್ನ ಚಿಹ್ನೆಯನ್ನು ಗೌರವಿಸಿದ್ದೇವೆಂದು ದೇವರೇ ಹೇಳಿದ್ದಾನೆ. 32 ನೇ ಆಯತ್‌ಗಿಂತ ಮೊದಲು 31ನೇ ಆಯತ್‌ನಲ್ಲಿ ದೇವರಿಗೆ ಸಾಟಿ ಕಲ್ಪಿಸಬಾರದೆಂದು ಎಚ್ಚರಿಸಲಾಗಿದೆ. ಹಾಗೆ ಮೊದಲೇ ಏಕೆ ಹೇಳಿದ್ದಾರೆಂದರೇ! ತನ್ನ ನಿರ್ಣಯವಾದ (ದೇವರ ನಿರ್ಣಯವಾದ) ಚಿಹ್ನೆಯನ್ನು ಅಲ್ಲವೆಂದು,

ಅದರ ಸ್ಥಾನದಲ್ಲಿ ಇತರ ಯಾವುದನ್ನೂ ಪ್ರಪಂಚ ಸಂಬಂಧವಾದವುಗಳನ್ನು ಕಲ್ಪಿಸಬಾರದೆಂದು ಹೆಚ್ಚರಿಸುತ್ತಾ ಹೇಳಿದ್ದಾನೆ. ರಾಜಮುದ್ರೆಗೆ ರಾಜನೊಂದಿಗೆ ಸಮಾನವಾದ ಬೆಲೆ ಇದ್ದಂತೆ, ದೇವರ ಮುದ್ರೆಯಾದ ತನ್ನ ಚಿಹ್ನಕ್ಕೆ ತನ್ನೊಂದಿಗೆ ಸಮಾನವಾದ ಬೆಲೆ ಇರುತ್ತದೆಂದು, ಅಂತಹದರ ಸ್ಥಾನದಲ್ಲಿ ಮನುಷ್ಯರು ಯಾರೂ ಯಾವುದನ್ನೂ ದೇವರ ಚಿಹ್ನೆಗಳಾಗಿ ಹೇಳಬಾರದೆಂದು ಮೊದಲೇ 31ನೇ ಆಯತ್‌ನಲ್ಲಿ ಹೇಳುವುದು ನಡೆದಿದೆ. ಹಾಗೆ ಮೊದಲೇ ಎಚ್ಚರಿಸಿ ಹೇಳಿದರೂ, ಕೆಲವರು ಮನುಷ್ಯರು ಪ್ರಪಂಚ ಸಂಬಂಧ ವಸ್ತುಗಳನ್ನು, ಜಂತುಗಳನ್ನು ದೇವರ ಚಿಹ್ನೆಗಳಾಗಿ ವರ್ಣಿಸಿ ಹೇಳುವುದು ನಡೆದಿದೆ. ಹಾಗೆ ಹೇಳುವುದು ದೇವರಿಗೆ ವಿರುದ್ಧವಾಗಿ ಮಾತನಾಡಿದಂತಾಗುತ್ತದಲ್ಲವೆ! ಅಂತಹವನು ಆಕಾಶದಿಂದ ಕೆಳಗೆ ಬೀಳಿದಂತಾಗುತ್ತದೆಂದು ಸಹ ಈ ವಾಕ್ಯದಲ್ಲಿ ಹೇಳಿದ್ದಾನೆ. ಅಂತಹವರು ದೇವರ ಮೇಲೆ ಎಷ್ಟು ನಂಬಿಕೆಯಿಂದಿದ್ದರೂ ಉನ್ನತ ಸ್ಥಿತಿಯಿಂದ ನೀಚ ಸ್ಥಿತಿಗೆ ಬಂದಂತೆ ಎಂದು ಹೆಚ್ಚರಿಸುತ್ತಾ, ಆಕಾಶದಿಂದ ಕೆಳಗೆ ಬಿದ್ದವನೊಂದಿಗೆ ಸಮಾನ ಎಂದು ಹೇಳುವುದು ನಡೆದಿದೆ. ದೇವರೇ ಸ್ವತಃ ತನ್ನ ಚಿಹ್ನೆಯನ್ನು ಪ್ರಕಟಿಸಿ, ಅದನ್ನು ಗೌರವಿಸಿದವನೇ ನಿಜವಾದ ಭಕ್ತಿ ಮಾರ್ಗದಲ್ಲಿ ಇದ್ದಂತೆ ಎಂದು ಹೇಳಿದ್ದಾನೆ. ಅದನ್ನು ಗೌರವಿಸದವನು ಎಷ್ಟು ದೊಡ್ಡ ಜ್ಞಾನಿಯಾದರೂ ಅವನು ತೃಣಕ್ಕೆ ಸಮಾನ ಎಂದು ಹೇಳಿದ್ದಾನೆ.

**ಪ್ರಶ್ನೆ :– ದೇವರ ಗುರುತನ್ನು ದೇವರೇ ಪ್ರಕಟಿಸಿದ್ದಾನೆಂದು ಹೇಳುತ್ತೀರಾ?**

**ಉತ್ತರ :–** ಅಂತಿಮ ದೈವ ಗ್ರಂಥದಲ್ಲಿ ಸೂರಾ 5 ಆಯತ್ 2ರಲ್ಲಿ, ಸೂರಾ 22 ಆಯತ್ 32ರಲ್ಲಿ ಎರಡು ಬಾರಿ ಸ್ವತಃ ದೇವರೇ ತನ್ನ ಚಿಹ್ನೆಯನ್ನು ಕುರಿತು ಹೇಳಿ, ಅದನ್ನು ಗೌರವಿಸಿದರೇ ಅವನೇ ನಿಜವಾದ ನನ್ನ ಭಕ್ತನು ಎಂದು ಹೇಳಿರುವಾಗ ಇನ್ನು ಅನುಮಾನ ಯಾಕೆ? ದೇವರ ಚಿಹ್ನೆಯನ್ನು ದೇವರೇ ಹೇಳಿದ್ದಾನೆ ಆದರೆ ಮನುಷ್ಯರ್‍ಯಾರೂ ಹೇಳಲಿಲ್ಲ. ದೇವರು ಹೇಳಿದ ನಂತರ ದೇವರ ಚಿಹ್ನೆ ಯಾವುದೋ ತಿಳಿಯದೇ ಕೆಲವರು ಸ್ವತಃ ಇದೇ ದೇವರ ಚಿಹ್ನೆಗಳೆಂದು ನಿರ್ಣಯಿಸಿಕೊಂಡಿದ್ದಾರೆ. ದೇವರ ಗುರುತನ್ನು ದೇವರೇ

ನಿರ್ಣಯಿಸಿದ್ದಾನೆ ಹೊರತು ಮನುಷ್ಯರ್‍ಯಾರೂ ನಿರ್ಣಯಿಸಲಿಲ್ಲ. ಮನುಷ್ಯರು ನಿರ್ಣಯಿಸಿರುವವು ದೇವರ ಚಿಹ್ನೆಗಳಲ್ಲ. ಮನುಷ್ಯರು ನಿರ್ಣಯಿಸಿರುವವುಗಳಿಗೆ ದೈವಶಕ್ತಿ ಇರುವುದಿಲ್ಲ. ದೇವರು ನಿರ್ಣಯಿಸಿದ ಚಿಹ್ನೆ ಇಹಲೋಕ ಸಂಬಂಧವಾಗಿರುವುದಲ್ಲ. ಅದು ದೈವಜ್ಞಾನದಿಂದ ಮತ್ತು ದೈವಶಕ್ತಿಯಿಂದ ಕೂಡಿಕೊಂಡಿರುವುದಾಗಿ ಹೇಳಲಾಗಿದೆ. ದೇವರು ಕ್ಷಮಾಶೀಲಿಯೂ, ದೇವರನ್ನು ಆಶ್ರಯಿಸಿದ ಮನುಷ್ಯರ ಪಾಪಗಳನ್ನು ದೇವರು ಕ್ಷಮಿಸಬಲ್ಲನು. ಅದೇ ರೀತಿಯಾಗಿ **ದೇವರ ಶಕ್ತಿಯಿಂದ ಕೂಡಿಕೊಂಡ ದೇವರ ಚಿಹ್ನೆಯೂ ಸಹ ಪಾಪಗಳನ್ನು ಕ್ಷಮಿಸುವ (ಹರಿಸುವ) ಶಕ್ತಿ ಇರುವುದಾಗಿ ಇರುತ್ತದೆ.**

**ಪ್ರಶ್ನೆ :– 'ದೇವರ ಚಿಹ್ನೆ' ಎಂದು ನೀವು ಏಕ ವಚನದಲ್ಲಿ ಹೇಳುತ್ತಿದ್ದೀರ? ಖುರಾನ್ ಗ್ರಂಥದಲ್ಲಿ ಎರಡು ಕಡೆ 'ದೇವರ ಚಿಹ್ನೆಗಳು' ಎಂದು ಬಹುವಚನದಲ್ಲಿ ಹೇಳಲಾಗಿದೆ. ವಾಸ್ತವಕ್ಕೆ ಯಾವುದು ನಿಜ. ದೇವರ ಚಿಹ್ನೆ ಬಹುವಚನವಾ ಅಥವಾ ಏಕವಚನವಾ?**

**ಉತ್ತರ :–** ರಾಜಮುದ್ರೆ ರಾಜನೊಬ್ಬನ ಶಾಸನಗಳಿಂದ ಕೂಡಿಕೊಂಡಿರುತ್ತದೆ. ಹಾಗೆಯೇ ದೇವರೊಂದರ ಚಿಹ್ನೆ ದೇವರೊಂದರ ಧರ್ಮಗಳಿಂದ ಕೂಡಿಕೊಂಡಿರುತ್ತದೆ. ದೇವರ ಚಿಹ್ನೆ ಮುಖ್ಯವಾದ ನಾಲ್ಕು ಧರ್ಮಗಳೊಂದಿಗೆ ಕೂಡಿಕೊಂಡಿದೆ. ನಾಲ್ಕು ಧರ್ಮಗಳಿಂದ ಕೂಡಿಕೊಂಡಿರುವುದರಿಂದ ದೇವರ ಚಿಹ್ನೆಗಳು ಎಂಬ ಗ್ರಂಥದಲ್ಲಿ ಹೇಳುವುದಾಗಿದೆ. ನಾಲ್ಕು ಧರ್ಮಗಳೊಂದಿಗೆ ಕೂಡಿಕೊಂಡು ಏಕವಾಗಿ ಇರುವುದರಿಂದ ನಾವು 'ಚಿಹ್ನೆ' ಎಂದಿದ್ದೇವೆ. ದೇವರ ಧರ್ಮಗಳು ಎಷ್ಟೇ ಇದ್ದರೂ ದೇವರು ಒಬ್ಬನೇ ಆದ್ದರಿಂದ ದೇವರನ್ನು ಏಕವಚನದಲ್ಲೇ ಹೇಳುತ್ತಿದ್ದೇವೆ. ಧರ್ಮಗಳ ಪ್ರಕಾರ ಹೇಳುವುದಾದರೇ ದೇವರು ಬಹುವಚನವಾಗಿ ಕಾಣಿಸುವನು. ಉದಾಹರಣೆಗೆ ದೇವರನ್ನು **"ಅಜೋಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಪಿಸನ್, ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾ ಆತ್ಮ ಮಾಯಯಾ"** ಎಂದು ಸಂಸ್ಕೃತ ಶ್ಲೋಕವನ್ನು, ಭಗವದ್ಗೀತೆಯಲ್ಲಿ ಜ್ಞಾನಯೋಗ ಆರನೇ ಶ್ಲೋಕದಲ್ಲಿ ಹೇಳಲಾಗಿದೆ. ಈ ಶ್ಲೋಕದಲ್ಲಿ ದೇವರನ್ನು

ಕುರಿತು ನಾಲ್ಕು ಸೂತ್ರಗಳನ್ನು ಹೇಳಿದ್ದಾರೆ. ಒಂದು ದೇವರು ಹುಟ್ಟುವಿಕೆ ಇಲ್ಲದವನು, ಎರಡು ದೇವರು ಸಾವು ಇಲ್ಲದವನು, ಮೂರು ಸರ್ವ ಜೀವರಾಶಿಗಳಿಗೂ ಅಧಿಪತಿಯನ್ನು (ದೇವರನ್ನು), ನಾಲ್ಕು ಪ್ರಕೃತಿಯನ್ನು ತನ್ನ ಆಧೀನದಲ್ಲಿ ಇಟ್ಟುಕೊಂಡಿರುವವನು. ಈ ರೀತಿಯಲ್ಲಿ ಈ ಶ್ಲೋಕದಲ್ಲಿ ದೇವರು ನಾಲ್ಕು ಧರ್ಮಗಳಾಗಿ ಹೇಳಲಾಗಿದ್ದಾನೆ. ಹಾಗೆಂದು ದೇವರನ್ನು ನಾಲ್ಕಾಗಿ ಇರುವವನು ಎಂದು ನಾವು ಬಹುವಚನದಲ್ಲಿ ಹೇಳಲಿಲ್ಲ ಅಲ್ಲವೆ! ದೇವರು ನಾಲ್ಕು ಧರ್ಮಗಳೊಂದಿಗೆ ಕೂಡಿಕೊಂಡಿದ್ದರೂ ಒಬ್ಬನಾಗಿ ಇದ್ದಾನೆ. ಆದ್ದರಿಂದ ದೇವರನ್ನು ಬಹುವಚನದಲ್ಲಿ ಹೇಳದೇ ಏಕವಚನದಲ್ಲಿಯೇ ಹೇಳುತ್ತಿದ್ದೇವೆ. ಅದೇ ರೀತಿ ದೇವರ ಚಿಹ್ನೆ ದೇವರ ಶಕ್ತಿಯನ್ನು ಸೂಚಿಸುವುದಾಗಿ ನಾಲ್ಕು ಧರ್ಮಗಳೊಂದಿಗೆ ಕೂಡಿಕೊಂಡಿದ್ದರೂ ಚಿಹ್ನೆಯೆಂದು ಏಕವಚನದಲ್ಲಿ ಹೇಳುತ್ತಿದ್ದೇವೆ. ದೇವರ ಚಿಹ್ನೆ ಪ್ರಜೆಗಳಿಗೆ ಅರ್ಥವಾಗುವುದಕ್ಕೆ ಅಲ್ಲಲ್ಲಿ ಬಹುವಚನದಲ್ಲಿ ಹೇಳಿದರೂ ಹೇಳಬಹುದು. ಮೇಲಿನ ಶ್ಲೋಕದಲ್ಲಿ ಒಂದೇ ದೇವರನ್ನು ನಾಲ್ಕು ವಿಧಗಳಲ್ಲಿ ಬಹುವಚನದಲ್ಲಿ ಧರ್ಮಗಳು ಇರುವವನೂ ಎಂದರೂ, ಕೊನೆಗೆ ಆತನು ಎಲ್ಲರಿಗೂ ದೇವರು ಎಂದು ಹೇಳಿದ್ದೇವಲ್ಲವೆ! ಅದೇ ವಿಧವಾಗಿ ಬಿಡಿಸಿ ಹೇಳಿದರೇ ದೇವರ ಚಿಹ್ನೆ ನಾಲ್ಕು ಧರ್ಮಗಳೊಂದಿಗೆ ಕೂಡಿಕೊಂಡು, ನಾಲ್ಕು ಭಾಗಗಳಾಗಿ ಬಹುವಚನವಾಗಿ ಇದೆ. ದೇವರು ಅನೇಕ ಧರ್ಮಗಳೊಂದಿಗೆ ಕೂಡಿಕೊಂಡಿದ್ದರೂ "ಏಕಂ ಬ್ರಹ್ಮ" ಎಂದು ('ಒಬ್ಬನೇ ದೇವರು' ಎಂದು) ಹೇಳಿದಂತೆ ದೇವರ ಚಿಹ್ನೆಯನ್ನು ಸಹ ಎರಡು ವಿಧಗಳಲ್ಲಿ ಹೇಳಬಹುದು. ಅರ್ಥವಾಗದವನಿಗೆ ಹೊಸದಾಗಿ ಕೇಳುವವನಿಗೆ ಬಹುವಚನವಾಗಿ ಹೇಳಬೇಕು, ಅರ್ಥವಾದವನಿಗೆ ಏಕವಚನದಲ್ಲಿ ಹೇಳಬೇಕು. ಆದ್ದರಿಂದ ನಿಮ್ಮ ಪ್ರಶ್ನೆಗೆ ಒಂದು ವಿಧವಾದ ಬಹುವಚನ ಸರಿಹೋಗುವುದು.

**ಪ್ರಶ್ನೆ :- ಪ್ರಸ್ತುತ ಕಾಲದಲ್ಲಿ ಮೂರು ಉದ್ದ ನಾಮಗಳನ್ನಾಗಲೀ, ಮೂರು ಅಡ್ಡನಾಮಗಳನ್ನಾಗಲೀ ಇಲ್ಲವೆ ಹಣೆಯ ಭಾಗದಲ್ಲಿ ಬೊಟ್ಟನ್ನು ಇಟ್ಟುಕೊಂಡ ವರನ್ನಾಗಲೀ ನೋಡಿ ಹಿಂದೂಗಳೆಂದು ಆ ಗುರುತುಗಳನ್ನನುಸರಿಸಿ ಹೇಳುತ್ತಿದ್ದೇವೆ.**

**ಇಲ್ಲಿಯವರೆಗು ಮತಗಳ ಚಿಹ್ನೆಗಳು (ಗುರುತುಗಳು) ಕೇಳಿದ್ದೇ ವಾಗಲೀ, ದೇವರ ಗುರುತು ಎನ್ನುವುದು ನಾವು ಹೊಸದಾಗಿ ಕೇಳುತ್ತಿದ್ದೇವೆ. ಭೂಮಿ ಮೇಲೆ ಯಾರಾದರೂ ಎಲ್ಲಾದರೂ ದೇವರ ಚಿಹ್ನೆಯನ್ನು ಕುರಿತು ಹೇಳಿಕೊಳ್ಳುವವರಿದ್ದಾರಾ?**

**ಉತ್ತರ :–** ದೇವರು 5000 ಸಂವತ್ಸರಗಳ ಪೂರ್ವವೇ ಕಲಿಯುಗ ಪ್ರಾರಂಭ ದಲ್ಲಿಯೇ ಭಗವದ್ಗೀತಾ ಜ್ಞಾನವನ್ನು ಹೇಳಿದಾಗಲೇ ಅದರಲ್ಲಿ ದೇವರ ಚಿಹ್ನೆಯನ್ನು ಕುರಿತು ಹೇಳಲಾಗಿದೆ. ನಂತರ ಬೈಬಲ್, ಖುರಾನ್ ಗ್ರಂಥಗಳಲ್ಲಿಯೂ ಸಹ ಆ ವಿಷಯವನ್ನು ಕುರಿತು ಹೇಳುವುದು ನಡೆದಿದೆ. ಆದರೇ ಮನುಷ್ಯರು ದೇವರು ಹೇಳಿದ ವಿಷಯವನ್ನು ಗ್ರಹಿಸದೆ ತಮ್ಮ ಇಷ್ಟಬಂದಹಾಗೆ ದೇವರ ಚಿಹ್ನವನ್ನು ಊಹಿಸಿಕೊಳ್ಳುವುದು ನಡೆದಿದೆ. ಯಾವುದಾದರೂ ನಿರ್ಣಯಕ್ಕೆ ಬರುವಾಗ ದೇವರು ಹೇಳಿದ ಗ್ರಂಥವನ್ನು ಪ್ರಮಾಣವಾಗಿ ತೆಗೆದುಕೊಂಡು ನಿರ್ಣಯಿಸಿಕೊಳ್ಳಬೇಕಾಗಿರುತ್ತದೆ. ದೈವಗ್ರಂಥ ಆಧಾರವಿಲ್ಲದೆ ದೇವರ ವಿಷಯಗಳನ್ನು ನಿರ್ಣಯಿಸಬಾರದು. ಹಾಗೆ ನಿರ್ಣಯಿಸಿಕೊಳ್ಳುವುದರಿಂದ ಮನುಷ್ಯ ದೇವರ ಮಾರ್ಗವನ್ನು ಬಿಟ್ಟು, ತಪ್ಪುದಾರಿ ಆದ ಅಜ್ಞಾನ ಮಾರ್ಗದಲ್ಲಿ ಹೋಗಬೇಕಾಗುತ್ತದೆ. ದೇವರು ತನ್ನ ಗ್ರಂಥದಲ್ಲಿ ತನ್ನ ಚಿಹ್ನೆಯನ್ನು ಕುರಿತಾದ ಜ್ಞಾನವನ್ನು ಮಿಳಿತಮಾಡಿ ಇಡುವುದೇ ಅಲ್ಲದೆ, ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ನನ್ನ ಚಿಹ್ನೆಯನ್ನು ಗೌರವಿಸಿ ಎಂದು ಸಹ ಹೇಳಿದ್ದಾನೆ. ಆದರೇ ಪ್ರಸ್ತುತ ಕಾಲದಲ್ಲಿ ದೇವರ ಚಿಹ್ನೆ ಎಂದರೇ ಏನು ಎಂದು ಬಹಳ ಜನರಿಗೆ ತಿಳಿಯದಂತೆ ಹೋಗಿದೆ.

ಸೃಷ್ಠಿ ಆದಿಯಿಂದ ಒಂದೇ ಜ್ಞಾನವಿತ್ತು. ಕಲಿಯುಗದವರೆಗು ಮತಗಳ ಸಮಸ್ಯೆಯೇ ಇಲ್ಲ. ಕಲಿಯುಗದಲ್ಲಿ ಮತಗಳು ಅವುಗಳ ಹೆಸರುಗಳು ಹೊರಗೆ ಬಂದಿವೆ. ಸೃಷ್ಠಿ ಆದಿಯಲ್ಲಿಯೇ ಆಕಾಶವಾಣಿಯಿಂದ ಜ್ಞಾನ ಹೇಳಲಾಗಿದೆ. ದೇವರು ತನ್ನ ಕೊನೆಯ ಗ್ರಂಥದಲ್ಲಿ **'ಭೂಮಿ ಮೇಲೆ ಮನುಷ್ಯರಿಗೆ ಮೂರು ವಿಧಗಳಾಗಿ ಜ್ಞಾನವನ್ನು ತಿಳಿಸುವೆನು'** ಎಂದು ಹೇಳಿದಂತೆ, ಅದರಲ್ಲಿ ಒಂದು

ವಿಧಾನವಾದ ‘ವಾಣಿ’ ಯಿಂದ ತನ್ನ ಜ್ಞಾನವನ್ನು ತಿಳಿಸುವೆನು ಎಂಬ ಮಾತನ್ನು ಸೃಷ್ಠಿ ಆದಿಯಲ್ಲಿಯೇ ನೆರವೇರಿಸಿದ್ದಾನೆ. ಆ ರೀತಿ ಹೇಳಿದ ಜ್ಞಾನ ಗ್ರಂಥ ರೂಪವಾಗಲಿಲ್ಲ. ಕೃತ, ತ್ರೈತಾ, ದ್ವಾಪರ ಎಂಬ ಮೂರು ಯುಗಗಳ ಪರ್ಯಂತವೂ ದೇವರು ಹೇಳಿದ ಜ್ಞಾನ ಶಬ್ದರೂಪವಾಗಿಯೆ ಇತ್ತು. ಕಲಿಯುಗದ ಪ್ರಾರಂಭದವರೆಗು ಎಂದರೆ ದ್ವಾಪರಯುಗದ ಕೊನೆಯವರೆಗು ದೇವರು ಆದಿಯಲ್ಲಿ ಹೇಳಿದ ಜ್ಞಾನ ಮಾತುಗಳ ರೂಪವಾಗಿ, ಹಾಡುಗಳ ರೂಪವಾಗಿ, ಪದ್ಯಗಳ ರೂಪವಾಗಿ, ಶ್ಲೋಕಗಳ ರೂಪವಾಗಿ ಹೇಳಿಕೊಳ್ಳುತ್ತಿದ್ದರು. ಗ್ರಂಥರೂಪ ವಾಗದ ಜ್ಞಾನ ಮೂರು ಯುಗಗಳಿದ್ದ ನಂತರ ದ್ವಾಪರಯುಗದ ಕೊನೆಯಲ್ಲಿ ಗ್ರಂಥರೂಪವಾಗಿದೆ. ಗ್ರಂಥರೂಪವಾದ ಜ್ಞಾನವನ್ನು ಕನ್ನಡ ಭಾಷೆಯಲ್ಲಿ **“ಭಗವದ್ಗೀತೆ”** ಎಂದು ಹೇಳಿದ್ದೇವೆ. ಭಾರತದೇಶದಲ್ಲಿ ಗ್ರಂಥರೂಪವಾದ ಜ್ಞಾನ (ಭಗವದ್ಗೀತೆ) ಮೊದಲು ಪಶ್ಚಿಮ ದೇಶಗಳ ಕಡೆ ಹರಡಿದೆ. ಪಶ್ಚಿಮ ದೇಶಗಳಲ್ಲಿ ಭಗವದ್ಗೀತೆ, **‘ತೌರಾತ್’** ಎಂದು ಹೇಳಲಾಗಿದೆ. ತೌರಾತ್ ಗ್ರಂಥ ಮೂಸಾಗೆ ಕೊಡಲಾಗಿದೆಯೆಂದು ನಂತರ ಆ ದೇಶದವರು ಹೇಳಿಕೊಂಡರೂ, ಆ ಮೂಸಾನೇ ಕೃಷ್ಣನೆಂದು ಬಹಳ ಜನರಿಗೆ ತಿಳಿಯದು.

ಸೃಷ್ಠಿ ಆದಿಯಲ್ಲಿ ಗ್ರಂಥ ರೂಪದಲ್ಲಿ ಜ್ಞಾನಕ್ಕೆ **“ಜಪರ”** ಎಂಬ ಪ್ರತ್ಯೇಕವಾದ ಹೆಸರು ಇತ್ತು ಎಂದು ಹೇಳಲಾಗಿದೆ. ಇದರ ಅರ್ಥ ’ಜ’ ಎಂದರೆ ಹುಟ್ಟುವುದು, ಮತ್ತು ‘ಪರ’ ಎಂದರೆ ಬೇರೆಯಾಗಿದೆಯೆಂದು ಅರ್ಥ. ಹುಟ್ಟಿರುವುದೆಲ್ಲಾ ದೇವರಿಗೆ ಬೆರೆಯಾಗಿರುವುದು ಅಥವಾ ಸೃಷ್ಠಿಸಲಾಗಿರುವುದೆಲ್ಲಾ ದೇವರ ಪರವಾಗಿ (ಬೇರೆಯಾಗಿ) ಇದೆಯೆಂದು ಅರ್ಥ ಬರುವಹಾಗೆ ದೇವರು ಹೇಳಿದ ಜ್ಞಾನಕ್ಕೆ ‘ಜಪರ’ ಎಂಬ ಅರ್ಥದಿಂದ ಕೂಡಿಕೊಂಡ ಹೆಸರು ಇತ್ತು. ಗ್ರಂಥರೂಪ ಆಗದಿರುವಾಗ ಭಾರತದೇಶದಲ್ಲಿ (ಇಂದೂ ದೇಶದಲ್ಲಿ) ‘ಜಪರ’ ಎಂಬ ಹೆಸರಿನಿಂದ ಇರುವ ಜ್ಞಾನ ಇತರ ಪಶ್ಚಿಮ ದೇಶಗಳಲ್ಲಿ **‘ಜಬೂರ್’** ಎಂಬ ಹೆಸರಿಂದ ಕರೆಯುತ್ತಿದ್ದರು. ನಮ್ಮ ದೇಶದಲ್ಲಿ ‘ಜಪರ’ ಎನ್ನುವುದಾಗಲೀ, ಇತರ ದೇಶಗಳಲ್ಲಿ ಇರುವ ‘ಜಬೂರ’ ಎಂಬ ಹೆಸರಿನಿಂದ ಇರುವುದಾಗಲೀ,

ಎರಡೂ ಗ್ರಂಥರೂಪವಾಗಿ ಇಲ್ಲದ ಜ್ಞಾನವೆಂದು ತಿಳಿಯಬೇಕು. ಚರಿತ್ರೆ ತಿಳಿಯದ ಕೆಲವರು 'ಜಬೂರ' ಎನ್ನುವುದೂ ಸಹ ಒಂದು ಗ್ರಂಥವೇ ಎಂದು ಅಂದುಕೊಳ್ಳುವುದು ನಡೆದಿದೆ. ವಾಸ್ತವಕ್ಕೆ ಜಪರ ಎನ್ನುವುದಾಗಲೀ, ಜಬೂರ ಎನ್ನುವುದಾಗಲೀ ಗ್ರಂಥರೂಪದಲ್ಲಿ ಇರುವವಲ್ಲ. ಈ ಎರಡು ಗ್ರಂಥರೂಪದಲ್ಲಿ ಇಲ್ಲದ ಜ್ಞಾನವೊಂದರ ಹೆಸರುಗಳೆಂದು ತಿಳಿಯಬೇಕು. ದೇವರ ಜ್ಞಾನ ಮೊದಲು ಭಾರತದೇಶದಲ್ಲಿ ಗ್ರಂಥರುಪವಾಗಿದೆ. ವ್ಯಾಸನು ದೇವರ ಜ್ಞಾನವನ್ನು 'ಭಗವದ್ಗೀತೆ' ಎಂಬ ಹೆಸರಿಂದ ಬರೆದಾಗ, ಅದೇ ಇತರ ದೇಶಗಳಲ್ಲಿ 'ತೌರಾತ್' ಎಂಬ ಹೆಸರಿನಿಂದ ಹೇಳಿಕೊಳ್ಳಲಾಗಿದೆ. ದೈವಜ್ಞಾನ ಗ್ರಂಥ ರೂಪವಾಗದೇ ಜಪರ ಎಂಬ ಹೆಸರಿನಿಂದಿರುವ ದಿನಗಳಲ್ಲಿ ಜ್ಞಾನವನ್ನು ಹಾಡುಗಳು, ಪದ್ಯಗಳು, ವಚನಗಳ ರೂಪದಲ್ಲಿ ಹೇಳಿಕೊಳ್ಳುತ್ತಿದ್ದರು. ಆ ಕಾಲದಲ್ಲಿಯೇ ದೇವರ ಜ್ಞಾನವನ್ನು ಅವರಿಗೆ ಇಷ್ಟವಾದ ಪದ್ಧತಿಯಲ್ಲಿ ಎದುರಿಗಿರುವವರಿಗೆ ಅರ್ಥವಾಗುವಂತೆ ಹೇಳಿಕೊಳ್ಳುತ್ತಿದ್ದರು. 'ಏಳು ಮೇಡಲ ಚಿನ್ನದಿ ಕಡು ರಮ್ಯಮುಗ ಉನ್ನದಿ' ಎಂಬ ಮಾತು 'ದೇವರು ಏಳು ಆಕಾಶಗಳ ಮೇಲೆ ಇದ್ದಾನೆ' ಎಂಬ ಮಾತು ಎರಡೂ ಒಂದೇ. ಹೇಳುವ ಜ್ಞಾನ ಸೂಕ್ಷ್ಮವಾಗಿರುವುದಾದರೂ ಅದಕ್ಕೆ ಒಂದು ರೂಪವನ್ನು ಹೋಲಿಸಿ ಹೇಳುತ್ತಿದ್ದರು. ಈ ರೀತಿ ಪೂರ್ವವೇ ದೇವರ ಜ್ಞಾನವನ್ನು ಒಂದು ಗುರುತಾಗಿ ತಿಳಿದಿರುತ್ತಿದ್ದರೆಂದು, ಅವರು ಹೇಳಿಕೊಂಡ ಜ್ಞಾನವನ್ನನು ಸರಿಸಿ ತಿಳಿಯುತ್ತಿದೆ. ಪೂರ್ವವು ಎಷ್ಟೋ ದೊಡ್ಡ ಜ್ಞಾನಿಗಳು, ಜ್ಞಾನಸಂಪನ್ನರು ಇರುತ್ತಿದ್ದರು. ಅಂದಿಗೆ ಅವರು ದೇವರ ವಿಷಯವನ್ನು ಜ್ಞಾನರೂಪದಿಂದ ಪೂರ್ತಿಯಾಗಿ ತಿಳಿದವರೆಂದು ತಿಳಿಯುತ್ತಿದೆ. ಅಂತಹ ದೊಡ್ಡ ಜ್ಞಾನಿಗಳು ಗತಿಸಿದ ಕಾಲದಲ್ಲಿ, ಕಲಿಯುಗ ಪ್ರಾರಂಭದ ಸಮಯಕ್ಕೆ ಭಾರತದೇಶವೆಲ್ಲಾ ಅಜ್ಞಾನದಿಂದ ತುಂಬಿಹೋಗಿರುವುದರಿಂದ ದೇವರು ಪುನಃ ತನ್ನ ಜ್ಞಾನವನ್ನು ಇಂದಿಗೆ ಕಲಿಯುಗದಲ್ಲಿ ಮೂರು ಬಾರಿ ಹೇಳಿಸಿದ್ದಾನೆ. ಮೂರುಬಾರಿ ಹೇಳಿದ ಜ್ಞಾನವೇ ಮೂರು ದೈವಗ್ರಂಥಗಳಾಗಿ ತಯಾರಾಗಿವೆ. ಎರಡು ಬಾರಿ "ದೂತ" ಎಂಬ ಹೆಸರಿನಿಂದ ಜ್ಞಾನವನ್ನು **'ಭಗವದ್ಗೀತೆ', 'ಬೈಬಲ್'**ಆಗಿ ಹೇಳಿಸಿದ ದೇವರು ಕೊನೆಗೆ ಮಹಾಜ್ಞಾನಿ ಆದ ಜಿಬ್ರಯೇಲ್ ಎಂಬ ಗ್ರಹದಿಂದ ಮುಹಮ್ಮದ್

ಪ್ರವಕ್ತರವರಿಗೆ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಅದುವೇ **'ಖುರಾನ್'** ಗ್ರಂಥವಾಗಿ ಬಂದಿದೆ. **ದೇವರು ಒಟ್ಟು ನಾಲ್ಕು ಬಾರಿ ಜ್ಞಾನವನ್ನು ತನ್ನ ಮೂರು ಪದ್ಧತಿಗಳಿಂದ ತಿಳಿಸಿರುವಾಗ, ಒಂದು ಗ್ರಂಥವಾಗದ ಜ್ಞಾನವಾಗಿ ಇರುವಾಗ, ಮೂರು ಗ್ರಂಥಗಳಾದ ಜ್ಞಾನವಾಗಿ ಇವೆ. ಅವುಗಳ ಹೆಸರುಗಳನ್ನೇ ಕ್ರಮವಾಗಿ ಜಬೂರ್, ತೌರಾತ್, ಇಂಜೀಲ್, ಖುರಾನ್ ಎಂದು ಅನ್ನುತ್ತಿದ್ದಾರೆ. ತೌರಾತ್ (ಭಗವದ್ಗೀತೆ), ಇಂಜೀಲು (ಬೈಬಲ್), ಖುರಾನ್ ಎನ್ನುವವು ಮೂರು ಗ್ರಂಥಗಳಾಗಿ ಇರುವಾಗ, ಜಬೂರ್ ಎನ್ನುವುದು ಮಾತ್ರ ಗ್ರಂಥವಲ್ಲ.** "ಜಪರ" ಎಂಬ ದೈವಜ್ಞಾನ ಪಶ್ಚಿಮ ದೇಶಗಳಲ್ಲಿ 'ಜಬೂರ' ಜ್ಞಾನವಾಗಿ ಹೇಳಲಾಗಿದೆ. ಮೊದಲು ಗ್ರಂಥವಿಲ್ಲದ ಸಮಯದಲ್ಲಿ ಜಪರ ಇಲ್ಲವೆ ಜಬೂರ ಜ್ಞಾನದಿಂದಲೇ ದೇವರ ಚಿಹ್ನವನ್ನು ಹಾಡುಗಳ ರೂಪದಲ್ಲಿ, ಪದ್ಯಗಳ ರೂಪದಲ್ಲಿ ಹೋಲಿಸಿ ಹೇಳಿದ್ದಾರೆಂದು ತಿಳಿಯುತ್ತಿದೆ.

**ಪ್ರಶ್ನೆ :– ಜಬೂರ್ ಎನ್ನುವುದು ಒಂದು ಗ್ರಂಥವೆಂದು ಕೆಲವರು ಮುಸ್ಲೀಮ್‌ರು ಹೇಳಿರುವಾಗ ಕೇಳಿದ್ದೇವೆ. ನೀವು ಗ್ರಂಥವಲ್ಲ ಬೋಧೆ ಮಾತ್ರವೆ ಎನ್ನುತ್ತಿದ್ದೀರ. ನೀವು ಹೇಳುವುದಕ್ಕೆ ಯಾವುದಾದರೂ ಆಧಾರವಿದೆಯಾ?**

**ಉತ್ತರ :–** ಆಧಾರವಿದೆಯೆಂದೇ ನಾವು ಹೇಳುತ್ತಿದ್ದೇವೆ. ಆಧಾರವಿಲ್ಲದಂತೆ ಕುರುಡಾಗಿ ಯಾವುದನ್ನೂ ಹೇಳುವುದಿಲ್ಲ. ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಸೂರಾ 21, ಆಯತ್ 105ರಲ್ಲಿ ಈ ರೀತಿ ಇದೆ ನೋಡಿರಿ (21. 105) **"ಸಜ್ಜನರಾದ ನನ್ನ ದಾಸರೇ ಭೂಮಿಗೆ ವಾರಸರಾಗುತ್ತೀರೆಂದು ನಾವು ಜಬೂರ್‌ನಲ್ಲಿ ಹಿತಬೋಧೆ ಅನಂತರ ಬರೆದಿದ್ದೇವೆ"** ಈ ಆಯತ್‌ನ್ನು ನೋಡಿದರೇ ಜಬೂರ್ ಎನ್ನುವುದು ಗ್ರಂಥವಲ್ಲವೆಂದು ಹಿತಬೋಧ ಮಾತ್ರವೇ ಎಂದು ತಿಳಿಯುತ್ತಿದೆ. ಜಬೂರ್ ಹಿತಬೋಧೆ ನಂತರ ಅದನ್ನೇ ಮೂರು ದೈವ ಗ್ರಂಥಗಳಲ್ಲಿ ಬರೆಯುವುದು ನಡೆದಿದೆ. ಈ ಆಯತ್‌ನಲ್ಲಿನ ವಿಷಯವನ್ನು ನಾವು ಹೇಳುವುದೇ ಅಲ್ಲದೇ, ಕೆಲವರು ಮುಸ್ಲಿಮ್ ಹಿರಿಯರು ಈ ಆಯತ್‌ಗೆ ಬರೆದ ವಿವರದಲ್ಲಿಯೂ ಸಹ ಈ ರೀತಿ ಇದೆ ನೋಡಿರಿ. "ಜಬೂರ್ ಎಂದರೇ ಅದು ಗ್ರಂಥವಾಗಬಹುದು ಇಲ್ಲವೆ ಪೂರ್ವದ ದೈವ ಗ್ರಂಥಗಳಲ್ಲಿ

ಮತ್ತ್ಯಾವುದಾದರೂ ಗ್ರಂಥವೂ ಸಹ ಆಗಿರಬಹುದು. ಈ ಆಯತ್‌ನಲ್ಲಿ 'ಜಿಕ್ರ್' ಎಂಬ ಅರಬ್ಬೀ ಪದವನ್ನು ಬಳಸುವುದು ನಡೆದಿದೆ. ಜಿಕ್ರ್ ಎಂದರೆ 'ಹಿತಬೋಧೆ' ಎಂಬ ಅರ್ಥ ಬರಬಲ್ಲದು." ಈ ಮಾತನ್ನು ನೋಡಿದ ನಂತರ ಜಬೂರ್ ಎನ್ನುವುದು ಕೇವಲ ಹಿತಬೋಧ ಮಾತ್ರವೇ ಎಂದೂ, ನಂತರ ಆ ಬೋಧೆ ಗ್ರಂಥರೂಪವಾಗಿದೆಯೆಂದು ತಿಳಿಯುತ್ತಿದೆ. ಗ್ರಂಥರೂಪವಾದ ನಂತರ ಆ ಗ್ರಂಥಕ್ಕೆ ಬೇರೆಬೇರೆ ಹೆಸರುಗಳು ಇಡಲಾಗಿವೆ. ಜಬೂರ್ ಹಿತಬೋಧ ಇರುವವೇ ಆಕಾಶಗ್ರಂಥಗಳು ಎಂಬ ದೈವ ಗ್ರಂಥಗಳು. ಮೂರು ಯುಗಗಳಲ್ಲಿ ಜಪರ (ಜಬೂರ್) ಎಂಬ ಹೆಸರಿನಿಂದಿರುವ ದೈವಬೋಧ ಇಲ್ಲವೆ ಆಕಾಶವಾಣಿಯಿಂದ ಬಂದಿರುವ ಬೋಧೆಯೇ ನಂತರ ಕಲಿಯುಗದಲ್ಲಿ ಮೂರು ದೈವಗ್ರಂಥಗಳಾಗಿ ಬಂದಿದೆ. ಇದೆಲ್ಲವೂ ತಿಳಿದ ನಂತರ ಜಬೂರ್ ಎನ್ನುವುದು ದೈವಬೋಧ ಯೇಯೆಂದು, ಅದುವೇ ಕೊನೆಗೆ ದೈವ ಗ್ರಂಥಗಳಾಗಿ ತಯಾರಾಗಿವೆಯೆಂದು ತಿಳಿಯಬಲ್ಲದು.

**ಪ್ರಶ್ನೆ :– ಪ್ರಸ್ತುತ ಕಾಲದಲ್ಲಿ 'ಜಬೂರ್' ಬೋಧ 'ತೌರಾತ್' ಗ್ರಂಥವಾಗಿದೆಯೆಂದೂ, ತೌರಾತ್ (ಭಗವದ್ಗೀತೆ)ಯಲ್ಲಿನ ಜ್ಞಾನವೇ ಉಳಿದ ಇಂಜೀಲು (ಬೈಬಲ್) ಖುರಾನ್ ಗ್ರಂಥಗಳಿಗೆ ಆಧಾರವಾಗಿದೆಯೆಂದೂ, ಈ ಮೂರು ಗ್ರಂಥಗಳ ಜ್ಞಾನದಲ್ಲಿ ದೇವರ ಚಿಹ್ನೆ ಮಿಳಿತವಾಗಿದೆಯೆಂದು ಯಾರಿಗಾದರೂ ತಿಳಿದಿದೆಯಾ?**

**ಉತ್ತರ :–** ದೈವಗ್ರಂಥಗಳಲ್ಲಿ ದೈವಜ್ಞಾನವಿದೆ. ದೈವಜ್ಞಾನ ಎಲ್ಲರಿಗೂ ಸುಲಭವಾಗಿ ಅರ್ಥವಾಗುವುದಲ್ಲ. ಮನುಷ್ಯನಿಗೆ ಎಷ್ಟೋ ಶ್ರದ್ಧೆ, ಬುದ್ಧಿ ಇರುವಾಗಲೇ ಅವನು ದೇವರಿಗೆ ಇಷ್ಟವಾದವನಾಗುತ್ತಾನೆ. ದೇವರಿಗೆ ಇಷ್ಟನಾದವನಿಗೇ ದೇವರ ಕರುಣೆಯಿಂದ ದೇವರ ಜ್ಞಾನ ಅರ್ಥವಾಗುತ್ತದೆ. ಆದರೇ ಈದಿನ ಮನುಷ್ಯ ತನಗೆ ತಿಳಿದಿರುವುದೇ ಜ್ಞಾನವೆಂದುಕೊಳ್ಳುತ್ತಿದ್ದಾನೆ. ದೈವಗ್ರಂಥದಲ್ಲಿನ ಜ್ಞಾನವನ್ನು ತಪ್ಪಾಗಿ ಅರ್ಥ ಮಾಡಿಕೊಂಡು, ತನಗೆ ತಿಳಿದಿರುವುದೇ ನಿಜವಾದ ಜ್ಞಾನವೆಂದು ಅಂದುಕೊಳ್ಳುತ್ತಿದ್ದಾನೆ. ಎಲ್ಲಾದರೂ ದೇವರೇ ಪರೋಕ್ಷವಾಗಿ ನಿನ್ನದು ತಪ್ಪು, 'ಅಸಲು ಜ್ಞಾನ' ಇದು ಎಂದು ಹೇಳಿದರೂ, ಹೇಳುವವನ ಶ್ರೇಷ್ಟತ್ವವನ್ನು

ತಿಳಿಯದೆ, ದೇವರನ್ನೇ 'ನಿನಗೇ ತಿಳಿಯದು' ಎಂದು ಧಿಕ್ಕರಿಸುವವರಿದ್ದಾರೆ. ಆದ್ದರಿಂದ ದೇವರ ಜ್ಞಾನ ತಿಳಿಯುವುದು ಸುಲಭವಾದ ಕೆಲಸವಲ್ಲ. ದೇವರು ಪ್ರತ್ಯಕ್ಷವಾಗಿ ಹೇಳಿದರೂ, ಪರೋಕ್ಷವಾಗಿ ಹೇಳಿದರೂ ಮನುಷ್ಯ ಕೇಳುವ ಸ್ಥಿತಿಯಲ್ಲಿ ಇಲ್ಲ. ಆಧಾರವಿಲ್ಲದಿದ್ದರೂ ತನಗೆ ತಿಳಿದಿರುವುದೇ ನಿಜ ಜ್ಞಾನವೆಂದು ಅಂದುಕೊಳ್ಳುತ್ತಿದ್ದಾನೆ.

**ಪ್ರಶ್ನೆ :– ಈ ಕಾಲದಲ್ಲಿ ದೇವರ ಚಿಹ್ನೆ ಎಂಬ ಮಾತನ್ನು ಪ್ರತ್ಯಕ್ಷವಾಗಿ ಖುರಾನ್ ಗ್ರಂಥದಲ್ಲಿ ನೋಡಿದ್ದೇವೆ. ಆದರೇ ದೇವರ ಚಿಹ್ನೆಯನ್ನು ಕುರಿತು ಯಾರಾದರೂ ಎಲ್ಲಾದರೂ ಪ್ರಸ್ತಾಪಿಸಿದ್ದಾರಾ? ಯಾರಿಗಾದರೂ ಇದನ್ನು ಕುರಿತು ತಿಳಿದಿದೆಯಾ?**

**ಉತ್ತರ :–** ಖುರಾನ್ ಗ್ರಂಥದಲ್ಲಿ ದೇವರ ಚಿಹ್ನೆಯನ್ನು ಕುರಿತು ಓದುವುದಕ್ಕಿಂತ ಮೊದಲೇ ಭಗವದ್ಗೀತೆ ಗ್ರಂಥದಲ್ಲಿಯೂ, ಬೈಬಲ್ ಗ್ರಂಥದಲ್ಲಿಯೂ ಇರುವ ಜ್ಞಾನದಿಂದ ದೇವರ ಚಿಹ್ನೆವೊಂದರ ವಿವರ ನಮಗೆ ಸ್ವಲ್ಪ ತಿಳಿದಿದೆ. ಆದ್ದರಿಂದ ಈ ದಿನ ಮತಗಳಿಗೆ ಅತೀತವಾಗಿ ಇರುವುದು ದೇವರ ಚಿಹ್ನೆ ಎಂದು ಹೇಳುತ್ತಿದ್ದೇವೆ. ಕಾಣಿಸುವ ನಾವು ದೇವರ ಚಿಹ್ನೆಯನ್ನು ಕುರಿತು ಹೇಳಿದರೇ ನೀವು ನಂಬದೇ ಇರಬಹುದು. ಆದರೇ ನಮ್ಮ ಮುಂದೆ ನಡೆದ ಪ್ರತ್ಯಕ್ಷ ವಿಷಯವನ್ನು ಕೇಳಿದರೇ ನಿಮಗೆ ಸ್ವಲ್ಪ ನಂಬಿಕೆ ಉಂಟಾಗಬಹುದು. ಕಳೆದ ಗುರು ಪೌರ್ಣಮಿ ದಿನಾಂಕ 31–07–2015ರಂದು ನಡೆದಿದೆ. ಆ ದಿನ ಒಬ್ಬ ಮುಸ್ಲಿಮ್ ಮಹಿಳೆ ದೇವರು ಎಲ್ಲ ಮತಗಳಿಗೂ ಒಬ್ಬನೇ ಎಂದು ತಿಳಿದು, ಆಕೆ ಗುರುಪೌರ್ಣಮಿ ದಿನದಂದು ತನ್ನ ಐದು ಸಂವತ್ಸರಗಳ ವಯಸ್ಸಿರುವ ಮಗನಿಗೆ ಕಾಷಾಯಬಣ್ಣದ ಶೇರ್ವಾನೀ ವಸ್ತ್ರಗಳನ್ನು ಹಾಕಿ, ತಲೆಯಮೇಲೆ ಕಾಷಾಯಬಣ್ಣದ ಟೋಪೀಯನ್ನಿಟ್ಟು, ಗುರುವೇಷ ಹಾಕಿ ಕಾಷಾಯಬಣ್ಣದಲ್ಲಿ ಕಾಣಿಸುವಂತೆ ಮಾಡಿ, ಮುಖದ ಮೇಲೆ ಮೂರು ನಾಮಗಳನ್ನು ಇಟ್ಟು, ಹಿಂದೂ ಗುರುಗಳ ಹಾಗೆ ತಯಾರುಮಾಡಿದ್ದಾಳೆ. ಆತನ ವೇಷ ಗುರುಪೌರ್ಣಮಿ ದಿನದಂದು ಹಾಕಿರುವುದರಿಂದ ಆ ಹುಡುಗನನ್ನು ತಂದು ನಮಗೆ ತೋರಿಸುವುದು ನಡೆದಿದೆ. ಆ ವೇಷ ನೋಡುವುದಕ್ಕೆ ಚೆನ್ನಾಗಿದೆ. ಆದರೇ ಮುಖದ ಮೇಲೆ

ಇಟ್ಟಿರುವ ನಾಮವನ್ನು ನೋಡಿ ಆತನನ್ನು ಒಬ್ಬ ಮತಕ್ಕೆ ಪರಿಮಿತಿ ಮಾಡಿದಂತಾಗಿದೆ. ಗುರುವು ಎಂದರೆ ಆತನು ಒಬ್ಬ ಮತಕ್ಕೆ ಸಂಬಂಧಿಸಿ ಇರಬಾರದು. ಆದ್ದರಿಂದ ಹಿಂದೆಲೇ ಆ ಹುಡುಗನ ತಂದೆ ಷಫೀ ಹತ್ತಿರ "ನೀವು ಗುರುವೇಷ ಹಾಕಿ ನನಗೆ ತೋರಿಸಿದ್ದೀರ. ಗುರುವು ಯಾವ ಒಂದು ಮತಕ್ಕೆ ಸಂಬಂಧಿಸಿದವನಾಗಿ ಇರುವುದಿಲ್ಲ. ಗುರುವು ದೇವರ ಭಾವಗಳನ್ನು ಹೊಂದಿ ದೈವತ್ವದಿಂದ ಕೂಡಿಕೊಂಡಿರುತ್ತಾನೆ. ಆದ್ದರಿಂದ ಪ್ರಪಂಚವೆಲ್ಲದಕ್ಕೂ ನಿಜವಾದ ಗುರುವು, ದೇವರು ಒಬ್ಬನೇ. ಇದೇ ವಿಷಯವೇ ದ್ವಿತೀಯ ದೈವ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 23ನೇ ಅಧ್ಯಾಯ 10ನೇ ವಾಕ್ಯದಲ್ಲಿ **"ಗುರುವು ಎಂದು ಹೆಸರಿಟ್ಟು ಕರೆಯಬೇಡ ನಿಮ್ಮ ಗುರುವು ಪರಲೋಕದಲ್ಲಿರುವವನೇ (ದೇವರೇ)"** ಎಂದು ಹೇಳಲಾಗಿದೆ. ಇದನ್ನನುಸರಿಸಿ ದೇವರು ಒಂದು ಮತಕ್ಕೆ ಸಂಬಂಧಿಸಿರುವವನು ಅಲ್ಲ. ಆತನು ಸಮಸ್ತ ಜನರಿಗೂ ಸಂಬಂಧಿಸಿದವನೆಂದು ತಿಳಿಯುತ್ತಿದೆ. ಈಗ ನೀವು ಹಾಕಿದ ಗುರುವೊಂದರ ಅಲಂಕಾರದಲ್ಲಿ ತ್ರಿನಾಮವನ್ನು ಹಣೆಯ ಮೇಲೆ ಧರಿಸಿರುವುದರಿಂದ, ಅದನ್ನನುಸರಿಸಿ ಈತನು ಹಿಂದೂಗಳ ಗುರುವು ಎಂದು ಹೇಳುವುದಕ್ಕೆ ಅವಕಾಶವಿದೆ. ಆದ್ದರಿಂದ ಇದು ದೇವರು ಹೇಳಿದ ಗುರುವೇಷಧಾರಣೆ ಅಲ್ಲದೇ ಒಂದು ಮತಕ್ಕೆ ಸಂಬಂಧಿಸಿದ ವೇಷಧಾರಣೆಯಾಗುತ್ತದೆ. ಒಂದು ಮತಕ್ಕೆ ಸಂಬಂಧಿಸಿದ ವೇಷಧಾರಣೆ ಅಲ್ಲದೆ ಎಲ್ಲ ಮತಗಳ ಗುರುಗಳಹಾಗೆ ಇರುವುದಕ್ಕೆ, ಮುಖದ ಮೇಲೆ ಮತ ಗುರುತನ್ನು ತೆಗೆದುಹಾಕಿ, ದೇವರ ಗುರುತನ್ನು ಧರಿಸೆಂದು ಹೇಳುತ್ತಿದ್ದೇವೆ" ಎಂದು ಹೇಳಿದ್ದೇವೆ. ಆಗ ಮುಸ್ಲಿಮ್ ಆದ ಆ ಬಾಲಕನ ತಂದೆ "ದೇವರ ಗುರುತು ಎಂದರೇ ಏನು?" ಎಂದು ಕೇಳಿದ್ದಾನೆ. ಆಗ ನಾವು "ಮುಸ್ಲಿಮ್‌ರೆಲ್ಲರೂ ನಮ್ಮದು ಎಂದು ಹೇಳುವ ಖುರಾನ್ ಗ್ರಂಥದಲ್ಲಿ 22ನೇ ಸೂರಾ 32ನೇ ಆಯತ್‌ನಲ್ಲಿ ಹೇಳಿರುವುದೇ ದೇವರ ಗುರುತು" ಎಂದು ಹೇಳಿದ್ದೇವೆ. ಆಗ ಆತನು ಮುಸ್ಲಿಮ್ ಹಿರಿಯರ ಹತ್ತಿರಕ್ಕೆ ಹೋಗಿ ಖುರಾನ್‌ನಲ್ಲಿ ಹೇಳಿದ ದೇವರ ಗುರುತನ್ನು ಕುರಿತು ಕೇಳಿದ್ದಾನೆ. ಆಗ ಅವರ ಹಿರಿಯರು ಈ ರೀತಿ ಹೇಳಿದ್ದಾರೆ.

## ದೇವರ ಚಿಹ್ನೆ

"ಷಆಯಿರ್ ಎಂದರೆ ಗುರುತುಗಳು ಇಲ್ಲವೆ ಚಿಹ್ನೆಗಳು ಎಂದು ಅರ್ಥ. ಸಂಕೇತ ಎಂದೂ ಸಹ ಒಂದು ಅರ್ಥ ಬರುತ್ತದೆ. ಯುದ್ಧಗಳಲ್ಲಿ ಸೈನಿಕಚರ್ಯೆಗಳಿಗಾಗಿ ಸಹ ಕೆಲವು ಸಂಕೇತ ಪದಗಳನ್ನು ಉಪಯೋಗಿಸುತ್ತಾರೆ. ಆ ಕೋಡ್‌ನ್ನು ಸಂಬಂಧಿತ ವ್ಯಕ್ತಿಗಳು ಮಾತ್ರವೇ ಗುರುತಿಸುತ್ತಾರೆ. ಹಾಗೇ ದೇವರ ಚಿಹ್ನೆಗಳು ಎಂದರೆ ಇಸ್ಲಾಮ್ ಧರ್ಮವೈಶಿಷ್ಟ್ಯವನ್ನು, ಪ್ರತ್ಯೇಕತೆಯನ್ನು ಸಾರಿ ಹೇಳುವ ಆದೇಶಗಳು ಎಂಬ ಮಾತು. ಅವುಗಳಿಂದ ಒಬ್ಬ ಮುಸ್ಲಿಮ್ ಪ್ರಪಂಚದಲ್ಲಿ ತನ್ನ ವ್ಯಕ್ತಿತ್ವವನ್ನು, ವೈಶಿಷ್ಟ್ಯವನ್ನು ಸಾರಿ ಹೇಳುತ್ತಾನೆ. ಇತರ ಮತಗಳಿಂದ ಆ ಚಿಹ್ನೆಗಳನ್ನು ಆತನನ್ನು ಸ್ಪಷ್ಟವಾಗಿ ಬೇರೆಮಾಡುತ್ತವೆ. ಮಕ್ಕಾದಲ್ಲಿನ ಸಫಾ, ಮರ್ವಾ ಪರ್ವತಗಳು ಸಹ ದೇವರ ಚಿಹ್ನಗಳಾಗಿ ಖರಾರು ಮಾಡಲಾಗಿವೆ. ಏಕೆಂದರೆ ಮುಸ್ಲಿಮ್‌ರು ಹಜ್, ಉಮ್ರಾಗಳ ಸಂದರ್ಭವಾಗಿ ಈ ಎರಡು ಗುಡ್ಡಗಳ ಮಧ್ಯ 'ಸಯೀ' ಮಾಡುತ್ತಾರೆ. ಈ ಆಯತ್‌ನಲ್ಲಿ ಹಜ್‌ನಲ್ಲಿನ ಇತರ ಕ್ರಿಯೆಗಳು ಸಹ ದೈವ ಚಿಹ್ನಗಳಾಗಿ ಮಾಡಲಾಗಿವೆ. ಮುಖ್ಯವಾಗಿ ಖುರ್ಬಾನಿ ಪಶುಗಳು ದೈವಚಿಹ್ನೆಗಳಾಗಿ ಅಭಿವರ್ಣಿಸಲಾಗಿವೆ. ಅವುಗಳನ್ನು ಗೌರವಿಸುವುದೆಂದರೇ ಬಲಿಷ್ಟವಾದ ಯಾವ ಲೋಪವಿಲ್ಲದೆ ಇರುವ ಪಶುಗಳನ್ನು ಖುರ್ಬಾನಿ ಕೊಡುವುದು. ಈ ತ್ಯಾಗ (ಖುರ್ಬಾನಿ) ಭಯಭಕ್ತಿಗಳಿಗೆ ಗುರುತುಗಳಾಗಿ ಹೇಳಲಾಗಿದೆ." ಹೀಗೆ ಹೇಳಿದ ವಿಷಯವೆಲ್ಲಾ ಕೇಳಿದ ವ್ಯಕ್ತಿ ಪುನಃ ನಮ್ಮ ಹತ್ತಿರಕ್ಕೆ ಬಂದು ಈ ರೀತಿ ನಮ್ಮನ್ನು ಕೇಳಿದ್ದಾನೆ.

"ನೀವು ದೇವರ ಚಿಹ್ನೆಯನ್ನು ಮುಖದ ಮೇಲೆ ಧರಿಸಿ. ದೇವರ ಗುರುತನ್ನು ಧರಿಸುವುದರಿಂದ ಒಂದು ಮತಕ್ಕೆ ಸಂಬಂಧಿಸಿದವನಾಗಿ ಅಲ್ಲದೆ ಎಲ್ಲ ಮತಗಳಿಗೂ ಸಂಬಂಧಿಸಿದವನಾಗಿ ಕಾಣಿಸುತ್ತೀಯ ಎಂದು ಹೇಳಿದ್ದೀರ. ನಮ್ಮ ಹಿರಿಯರ ಹತ್ತಿರಕ್ಕೆ ಹೋಗಿ ದೇವರ ಗುರುತನ್ನು ಕೇಳಿದರೇ ಮುಖದ ಮೇಲೆ ಧರಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದಂತೆ ಮಕ್ಕಾದಲ್ಲಿನ ಗುಡ್ಡಗಳನ್ನು, ದೇವರ ಹೆಸರಿನ ಮೇಲೆ ಬಿಟ್ಟಿರುವ ಪಶುಗಳನ್ನು ಚಿಹ್ನೆಗಳಾಗಿ ಹೇಳುತ್ತಿದ್ದಾರೆ. ನಮ್ಮ ಮುಖದ ಮೇಲೆ ಪಶುಗಳನ್ನು ಪರ್ವತಗಳನ್ನು ಹೇಗೆ ಇಟ್ಟುಕೊಳ್ಳಬೇಕು?

ದೇವರ ಗುರುತು ಒಂದು ಮತವನ್ನು ಸೂಚಿಸುವುದಿಲ್ಲ ದೇವರನ್ನೇ ಸೂಚಿಸುತ್ತದೆ ಎಂದು ಹೇಳಿದ್ದಾರೆ. ನಮ್ಮ ಹಿರಿಯರು ಅಲ್ಲಾ ಚಿಹ್ನೆಗಳು ಎಲ್ಲ ಮತಗಳಲ್ಲಿ ಮುಸ್ಲಿಮ್‌ನನ್ನು ಗುರುತು ಹಿಡಿಯುವಹಾಗೆ ಮಾಡುತ್ತದೆ ಎಂದು ಹೇಳಿದ್ದಾರೆ. ನೀವು ಹೇಳುವುದು ದೈವಿಕವಾಗಿ ಇದೆ. ನಮ್ಮವರು ಹೇಳುವುದು ಇಸ್ಲಾಮ್ ಮತಕ್ಕೆ ಸಂಬಂಧಿಸಿರುವುದಾಗಿಯೇ ಇದೆ. ಅಲ್ಲಾ ಖುರಾನ್ ಗ್ರಂಥದಲ್ಲಿ ದೇವರ ಚಿಹ್ನೆಗಳು ಇಂತಹ ಪಶುಗಳನ್ನಾಗಲೀ, ಇಂತಹ ಪರ್ವತಗಳನ್ನಾಗಲೀ ಹೇಳಲಿಲ್ಲ. ದೇವರು 'ನನ್ನ ಚಿಹ್ನೆಗಳು' ಎಂದು ಹೆಸರಿಟ್ಟು ಬಿಟ್ಟುಬಿಟ್ಟಿದ್ದಾನೆ. ನಮ್ಮವರೇನೋ ಪರ್ವತಗಳು, ಪಶುಗಳು ಎನ್ನುತ್ತಿದ್ದಾರೆ. ಮೇಲಾಗಿ ಬಲೆತ ಪಶುಗಳನ್ನು ಸಮರ್ಪಿಸಿದರೇ ದೇವರ ಗುರುತನ್ನು ಗೌರವಿಸಿದಂತೆ ಎಂದು ಹೇಳುತ್ತಿದ್ದಾರೆ. ಇದನ್ನನುಸರಿಸಿ ಬಲಹೀನವಾಗಿರುವ ಪಶುಗಳನ್ನು ಸಮರ್ಪಿಸಿದರೇ ದೇವರ ಚಿಹ್ನೆಯನ್ನು ಅಗೌರವಪಡಿಸಿದಂತೇಯೆಂದು ಅರ್ಥವಾಗುತ್ತಿದೆ. ಇದೆಲ್ಲಾ ಕೇಳಿದ ನಂತರ ದೇವರ ಮೇಲಿರುವ ಭಕ್ತಿಯೂ ಸಹ ಇಲ್ಲದಂತೆ ಹೋಗುವಂತಿದೆ. ದೇವರ ಚಿಹ್ನೆ ಗೌರವಕ್ಕೆ ಬಲೆತ ಪಶುಗಳಿಗೂ ಏನು ಸಂಬಂಧ? ಇದನ್ನನುಸರಿಸಿ ದೇವರಿಗೂ ಸಹ ಮನುಷ್ಯರಿಗೆ ಇಷ್ಟವಾದಂತೇ ಬಲವಾದ ಪಶುಗಳೆಂದರೇ ಇಷ್ಟವೆಂದು ಅರ್ಥವಾಗುತ್ತಿದೆ. ಹೀಗೆ ಹೇಳುವುದರಿಂದ ದೇವರ ಮೇಲೆ ಭಕ್ತಿ ಬೆಳೆಯುವುದಿಲ್ಲ ಆದರೇ, ಇರುವುದೂ ಸಹ ಹೋಗುವಂತಿದೆ. ನಮ್ಮ ವಿಷಯವನ್ನು ಪಕ್ಕದಲ್ಲಿಟ್ಟು ನೀವು ದೇವರ ಚಿಹ್ನವನ್ನು ಕುರಿತು ಏನು ಹೇಳುವಿರಿ?

**ಪ್ರಶ್ನೆ :– ಪ್ರತ್ಯಕ್ಷವಾಗಿ ನಡೆದ ಸಂಘಟನೆಯನ್ನು ಕುರಿತು ಹೇಳಿದ್ದೀರ. ಅಲ್ಲಿ ಹೋಗಿ ಇಲ್ಲಿ ಹೋಗಿ ದೇವರ ಚಿಹ್ನೆ ಎಂದರೆ ಏನೋ ನೀವೇ ಹೇಳಬೇಕಾಗಿ ಬಂದಿದೆ. ಷಫೀ ಎಂಬ ವ್ಯಕ್ತಿ ಅವರ ಹಿರಿಯರು ಹೇಳಿದ ಮಾತುಗಳನ್ನು ನಿಮಗೆ ಹೇಳಿದ್ದಾನೆ. ಅಷ್ಟೇ ಅಲ್ಲದೆ ಆತನಿಗೆ ಬಂದಿರುವ ಅನುಮಾನಗಳನ್ನೂ ಸಹ ವ್ಯಕ್ತ ಮಾಡಿದ್ದಾನೆ. ಇಲ್ಲಿಯವರೆಗು ನಮಗೆ ದೇವರ ಚಿಹ್ನೆಯನ್ನು ಕುರಿತು ತಿಳಿಸುತ್ತೇನೆಂದು ಹೇಳಿದ್ದೀರ ಆದರೆ ಇದೇ ದೇವರ ಚಿಹ್ನೆ ಎಂದು ನೀವೂ ಸಹ ತಿಳಿಸಿಲ್ಲ. ಈಗ ಪ್ರತ್ಯಕ್ಷವಾಗಿ ನಡೆದ ಸಂಘಟನೆಯಲ್ಲಿ ಷಫೀಯವರು ಕೇಳಿರುವುದಕ್ಕೆ ನೀವು ಹೇಗೂ**

**ಉತ್ತರ ಹೇಳಬೇಕಾಯಿತಲ್ಲವೆ! ಆತನು ಕೇಳಿದಾಗ ನೀವು ಏನು ಸಮಾಧಾನ ಹೇಳಿದ್ದೀರೋ ಆತನಿಗೆ ಹೇಳಿರುವುದೆಲ್ಲಾ ನೀವು ಹೇಳಿ. ನೀವು ಏನು ಹೇಳಿದ್ದೀರೋ ತಿಳಿದುಕೊಳ್ಳಬೇಕೆಂದು ನಮಗೂ ಸಹ ಉತ್ಸಾಹದಿಂದ ಇದೆ.**

**ಉತ್ತರ :–** ಹಸಿವಿನಿಂದ ಇರುವಾಗ ಸಿಕ್ಕಿರುವ ಆಹಾರ ಎಷ್ಟೋ ದೊಡ್ಡದಾಗಿ ಕಾಣಿಸುತ್ತದೆ. ಹಸಿವು ಇಲ್ಲದಿರುವಾಗ ಒಳ್ಳೆಯ ಆಹಾರವಿದ್ದರೂ ಅದರ ಮೇಲೆ ಆಸಕ್ತಿಯನ್ನು ತೋರಿಸುವುದಿಲ್ಲ. ಪ್ರತ್ಯಕ್ಷ ಸಂಘಟನೆ ನಡೆದು ಅದರಲ್ಲಿ ದೇವರ ಗುರುತು ಯಾವುದು? ಎಂದು ತಿಳಿದುಕೊಳ್ಳುವ ಆಸಕ್ತಿ ಇರುವುದರಿಂದ ತಿಳಿಯುವ ವಿಷಯದ ಮೇಲೆ ಯಾರಿಗಾದರೂ ಶ್ರದ್ಧೆ ಇರುತ್ತದೆ. ಶ್ರದ್ಧೆ ಇರುವಾಗಲೇ ಹೇಳಿರುವುದು ತಲೆಗೇರುತ್ತದೆ. ಆದ್ದರಿಂದ ದೇವರು ತನ್ನ ಚಿಹ್ನೆಯನ್ನು ಕುರಿತು ಗುರುಪೌರ್ಣಮಿ ದಿನ ಪ್ರತ್ಯಕ್ಷ ಸಂಘಟನೆಯಾಗಿ ಬರುವಹಾಗೆ ಮಾಡಿದ್ದಾನೆ. ತನ್ನ ಗುರುತು ಪ್ರಜೆಗಳಿಗೆ ತಿಳಿಯದೆಂಬ ಉದ್ದೇಶದಿಂದ ದೇವರೇ ಹಾಗೆ ಪ್ರತ್ಯಕ್ಷ ಸಂಘಟನೆಯಾಗಿ ತಂದು ನನ್ನಿಂದ ಆತನೇ ಹೀಗೆ ಹೇಳಿಸಿದ್ದಾನೆ. ಆ ಸಮಯದಲ್ಲಿ ಹೇಳುವವನು ನಾನು ಅಲ್ಲವೆಂದು ನನಗೆ ಚೆನ್ನಾಗಿ ತಿಳಿದಿದೆ. ನಾನು ಹೇಳಲಿಲ್ಲವೆಂದು ಗ್ರಹಿಸುವುದಾದರೇ, ಹೇಳುವುದೆಲ್ಲಾ ನನ್ನಲ್ಲಿ ನನ್ನನ್ನು ಓಡಿಸುವವನು (ನನ್ನನ್ನು ನಡೆಸುವವನು) ಎಂದು ನೀವು ತಿಳಿಯುವುದಾದರೇ, ಹೇಳುವುದು ಯಾರೋ ನಿಮಗೇ ತಿಳಿದುಹೋಗುತ್ತದೆ. ಹೇಳಲಾಗುವ ವಿಷಯ (ಜ್ಞಾನ) ಪೂರ್ತಿ ಸತ್ಯವೆಂದು ಸಹ ಅರ್ಥವಾಗುತ್ತದೆ. ಆಗ ಷಫೀಯಿಂದ ನಾನು ಮಾತನಾಡಿದಂತೆ ಮೇಲಕ್ಕೆ ಕಾಣಿಸಿದರೂ, ಒಳಗಿನಿಂದ ಯಾರು ಹೇಳಿದರೇ ಸತ್ಯವೊ ಅವರೇ ಮಾತನಾಡುತ್ತಿದ್ದಾರೆ.

"ಖುರಾನ್ ಗ್ರಂಥದಲ್ಲಿ ಸೂರಾ2, ಆಯತ್ 29ರಲ್ಲಿ ಹೀಗೆ ಇದೆ. (2–29) **"ದೇವರು ನಿಮಗಾಗಿ ಭೂಮಿಯಲ್ಲಿರುವ ಸಮಸ್ತ ವಸ್ತುಗಳನ್ನು ಸೃಷ್ಟಿಸಿದ್ದಾನೆ. ನಂತರ ಆಕಾಶದ ಕಡೆಗೆ ಧ್ಯಾಸೆಯನ್ನು ಮರಳಿಸಿ ಸರಿಯಾದ ರೀತಿಯಲ್ಲಿ ಸಪ್ತಾಕಾಶಗಳನ್ನು ನಿರ್ಮಿಸಿದ್ದಾನೆ, ಆತನು ಎಲ್ಲಾ ತಿಳಿದವನು"** ಎಂದು ಇದೆ

ಅಲ್ಲವೆ! ನಂತರ ಸೂರಾ29, ಆಯತ್ 44ರಲ್ಲಿ ಹೀಗೆ ಹೇಳಿದ್ದಾನೆ. **(29–44) ನ"ಅಲ್ಲಾಹ್ ಆಕಾಶಗಳನ್ನೂ, ಭೂಮಿಯನ್ನೂ ಸತ್ಯಬದ್ಧವಾಗಿ ಸೃಷ್ಠಿಸಿದ್ದಾನೆ. ಆಕಾಶಗಳನ್ನೂ, ಭೂಮಿಯನ್ನು ಪರಮಾರ್ಥದಿಂದ ಸೃಷ್ಠಿಸಿದ್ದಾನೆಂದು ತಿಳಿದರೇ ಇದರಲ್ಲಿ ದೊಡ್ಡ ನಿದರ್ಶನ ಸಿಗುತ್ತದೆ."** ಎಂದು ಇದೆ ಅಲ್ಲವೆ! ಇಲ್ಲಿ ಭಕ್ತಿ ಶ್ರದ್ಧೆಗಳನ್ನು ಹೊಂದಿ, ಬುದ್ಧಿಯನ್ನು ಉಪಯೋಗಿಸಿ ಈ ವಾಕ್ಯದಲ್ಲಿನ ಪ್ರತಿ ಪದವನ್ನು ವಿವರವಾಗಿ ನೋಡುವುದಾದರೇ ಇದರಲ್ಲಿ ದೊಡ್ಡ **ನಿದರ್ಶನ** ಇದೆಯೆಂದು ಹೇಳಿದ್ದಾರೆ. ನಿದರ್ಶನ ಎಂಬ ಮಾತನ್ನು ಬಿಡಿಸಿ ನೋಡಿದರೇ ಹೀಗೆ ಅರ್ಥ ಇದೆ. ದರ್ಶನ ಎಂದರೆ ಕಾಣಿಸುವುದು ಅಥವವಾ ತಿಳಿಯುವು ದೆಂದು ಅರ್ಥ. ನಿದರ್ಶನ ಎಂಬ ಪದದಲ್ಲಿ 'ನಿ' ವೊಂದರ ವಿಶೇಷತೆಯನ್ನು, ಪ್ರತ್ಯೇಕತೆಯನ್ನು ಗಮನಿಸಿದರೇ 'ನಿ' ವೊಂದರ ಅರ್ಥ ಇಲ್ಲ, ಅಲ್ಲ ಎಂದು ತಿಳಿಯುತ್ತಿದೆ. ನಿದರ್ಶನ ಎಂದರೆ ಯಾವುದಾದರೇ ದೃಶ್ಯವಾಗಿ, ದರ್ಶನವಾಗಿ ಇದೆಯೋ ಅದು ದೃಶ್ಯರೂಪದಲ್ಲಿ ತಿಳಿಯದಂತೆ, ಯಾವುದಾದರೇ ದರ್ಶನವಾಗಿ (ಕಾಣಿಸುವುದಾಗಿ) ಇದೆಯೋ ಅದು ತಿಳಿಯದಂತೆ ಅಡಗಿ ಇರುವುದನ್ನು ನಿದರ್ಶನ ಎನ್ನುತ್ತಿದ್ದೇವೆ. ಮೇಲಿನ ಆಯತ್‌ನಲ್ಲಿ ಯಾವುದಾದರೇ ಮನುಷ್ಯನಿಗೆ ಕಾಣಿಸಬೇಕೋ, ತಿಳಿಯಬೇಕೋ ಅದು ಕಾಣಿಸದಂತೆ, ಅಥವಾ ತಿಳಿಯದೆ ಅದರಲ್ಲಿ ಮಿಳಿತವಾಗಿ ಇದೆಯೆಂದು ತಿಳಿಯುತ್ತಿದೆ. ಆದ್ದರಿಂದ (29–44) ವಾಕ್ಯದ ಕೊನೆಯಲ್ಲಿ ತಿಳಿದರೇ ಇದರಲ್ಲಿ ದೊಡ್ಡ ನಿದರ್ಶನ ಸಿಗುತ್ತದೆಂದು ಹೇಳಿದ್ದಾರೆ. ಕಾಣಿಸದಿರುವುದು ಇಲ್ಲವೆ ತಿಳಿಯದಿರುವುದು ಸಿಗುತ್ತದೆಂಬ ವಾಕ್ಯದ ಕೊನೆಯಲ್ಲಿ ಹೇಳಿದ್ದಾನೆ. ಮೇಲಿನ ಎರಡು ವಾಕ್ಯಗಳಲ್ಲಿ ದೇವರು ಭೂಮಿಯನ್ನು, ಆಕಾಶವನ್ನು ಸೃಷ್ಠಿಸಿದ್ದಾನೆಂದು ಇದೆ. ಆದರೇ ಕೆಲವರು ಇದರಲ್ಲಿ ಯಾವ ರಹಸ್ಯವಿದೆ. ಕಾಣಿಸುವ ಭೂಮಿಯನ್ನು, ಕಾಣಿಸುವ ಆಕಾಶವನ್ನೇ ಅಲ್ಲವೆ ಸೃಷ್ಠಿಸಿರುವುದು. ಇದರಲ್ಲಿ ಕಾಣಿಸದ ವಿಷಯವೇನಿದೆ? ತಿಳಿಯದ ಜ್ಞಾನ ಏನಿದೆ? ಎಂದು ಅಂದುಕೊಳ್ಳಬಹುದು. ನಮಗೆ ತಿಳಿಯದ ರಹಸ್ಯವಿದೆಯೆಂಬ ಉದ್ದೇಶದಿಂದಲೇ ತಿಳಿಯುವುದಾದರೇ ಇದರಲ್ಲಿ ದೊಡ್ಡ ನಿದರ್ಶನ ಇದೆಯೆಂದು ಹೇಳಿದ್ದಾನೆ.

ವಾಕ್ಯದಲ್ಲಿ ಅಲ್ಲಾಹ್ ಭೂಮಿಯನ್ನು, ಆಕಾಶವನ್ನು **ಸತ್ಯಬದ್ಧವಾಗಿ** ಸೃಷ್ಟಿಸಿದ್ದಾನೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಆಕಾಶವನ್ನು, ಭೂಮಿಯನ್ನು **ಪರಮಾರ್ಥದಿಂದ** ಸೃಷ್ಟಿಸಿದ್ದಾನೆಂದು ಸಹ ಹೇಳಿದ್ದಾನೆ. ಪರಮಾರ್ಥ ಎಂದರೆ ನಿನಗೆ ತಿಳಿದ ಅರ್ಥಕ್ಕಿಂತ ಬೇರೆ ಅರ್ಥದಿಂದ ಎಂದು ತಿಳಿಯುತ್ತದೆ. ಪರ ಎಂದರೆ ಬೇರೆ ಎಂದೂ, ಪರಮಾರ್ಥ ಎಂದರೇ ನಿನ್ನ ಅರ್ಥಕ್ಕಿಂತ ಬೇರೆಯಾಗಿರುವುದೆಂದು ಅರ್ಥ. ಇದರ ಪ್ರಕಾರ ದೇವರು ಭೂಮಿ, ಆಕಾಶವನ್ನು ಸೃಷ್ಟಿಸಿದ್ದಾನೆಂದು ಅಂದರೆ ಅವು ಎರಡೂ ನಮಗೆ ಅರ್ಥವಾದ, ನಮಗೆ ಕಾಣಿಸುವ ಭೂಮಿ, ಆಕಾಶವಲ್ಲವೆಂದು ತಿಳಿಯುತ್ತಿದೆ. ಭೂಮಿ, ಆಕಾಶ ಎಂದರೆ ನಮಗೆ ಕಾಣಿಸುವವೆಂದು ಅಂದುಕೊಂಡರೆ ಈ ವಾಕ್ಯದಲ್ಲಿ **ಪರಮಾರ್ಥವೂ** ಇಲ್ಲ, **ನಿದರ್ಶವೂ** ಇಲ್ಲ. ಆಯತ್‌ನಲ್ಲಿ ದೇವರು ಹೇಳಿದಂತೆ ಪರಮಾರ್ಥ, ನಿದರ್ಶನ ಇರುವಂತಾದರೇ ಅವು ನಮಗೆ ಕಾಣಿಸುವವು ತಿಳಿಯುವವು ಆದ ಆಕಾಶವೂ ಅಲ್ಲ, ಭೂಮಿಯೂ ಅಲ್ಲ. ಆದರೆ ಪರಮಾರ್ಥದ ಪ್ರಕಾರ, ನಿದರ್ಶನದ ಪ್ರಕಾರ ಸತ್ಯಬದ್ಧವಾಗಿ ಭೂಮಿ, ಆಕಾಶಗಳು ಎಂದರೇ ಏನು? ಎಂದು ಈ ಆಯತ್‌ಗಳು ಓದುವ ಪ್ರತಿಯೊಬ್ಬರೂ ಆಲೋಚಿಸಬೇಕಾಗಿದ್ದೆ. ದೇವರು ತನ್ನ ಅಂತಿಮ ದೈವಗ್ರಂಥದಲ್ಲಿ ಸೂರಾ 3, ಆಯತ್ 7 ರಲ್ಲಿ ಈ ರೀತಿ ಹೇಳಿದ್ದಾನೆ.

**"ನಿಜಕ್ಕೆ ಮುತಷಾಬಿಹಾತ್ (ಸೂಕ್ಷ್ಮವಾಕ್ಯಗಳ) ವಾಸ್ತವ ಅರ್ಥ ದೇವರಿಗೆ ಹೊರತು ಮತ್ತು ಯಾವ ಇತರ ಮನುಷ್ಯರಿಗೆ ಯಾರಿಗೂ ತಿಳಿಯದು. ಆದರೇ ಜ್ಞಾನವನ್ನು ತಿಳಿದವರು ನಾವು ಇವುಗಳನ್ನು ನಂಬುತ್ತಿದ್ದೇವೆ. ಇವೆಲ್ಲವೂ ದೇವರ ಹತ್ತಿರದಿಂದ ಬಂದಿರುವ ವಾಕ್ಯಗಳೇ ಎನ್ನುತ್ತಾರೆ. ಬುದ್ಧಿ, ಶ್ರದ್ಧೆ ಇರುವವನು ಮಾತ್ರವೇ ದೇವರ ಜ್ಞಾನವನ್ನು ಗ್ರಹಿಸುತ್ತಾನೆ"** ಎಂದು ಇದೆ. ಮೇಲೆ ಹೇಳಿರುವ ಭೂಮಿ, ಆಕಾಶಗಳ ವಿಷಯ ಸೂಕ್ಷ್ಮಜ್ಞಾನದಿಂದ ಕೂಡಿಕೊಂಡಿದೆ. ಆದ್ದರಿಂದ **ಪರಮಾರ್ಥ, ನಿದರ್ಶನ, ಸತ್ಯಬದ್ಧವಾಗಿ** ಸೃಷ್ಟಿಸಿದ್ದಾನೆ ಎಂದು ಹೇಳಿದ್ದಾನೆ. ಬುದ್ಧಿ ಶ್ರದ್ಧೆ ಇರುವವರು ಮಾತ್ರವೇ ದೇವರು ಹೇಳಿದ ಸೂಕ್ಷ್ಮ ವಿಷಯಗಳನ್ನು

ಗ್ರಹಿಸಬಲ್ಲರು. ಬುದ್ಧಿಯಾಗಲೀ, ಶ್ರದ್ಧೆಯಾಗಲೀ ಇಲ್ಲದವರು ಸೂಕ್ಷ್ಮ ವಿಷಯಗಳೆಲ್ಲವೂ ಭೂಟಕಗಳೆಂದೂ, ಇತರರು ತಮ್ಮನ್ನು ಮಭ್ಯವಿರಿಸುವುದಕ್ಕೆ ಹೇಳುತ್ತಿರುವರೆಂದೂ, ಅವರ ಮಾತುಗಳನ್ನು ನಂಬಬಾರದೆಂದು ಹೇಳುತ್ತಿರುವರು. ದೇವರು **"ನಾನು ಅಂದುಕೊಂಡರೇ ಮನುಷ್ಯನನ್ನು ದೈವಮಾರ್ಗದಲ್ಲಿ ಕಳುಹಿಸುತ್ತೇನೆ, ಹಾಗೇ ನಾನು ಅಂದುಕೊಂಡರೇ ಮನುಷ್ಯನನ್ನು ಅಜ್ಞಾನ ಮಾರ್ಗದಲ್ಲಿಯೂ ಸಹ ಕಳುಹಿಸುತ್ತೇನೆ"** ಎಂದು ಖುರಾನ್ ಗ್ರಂಥದಲ್ಲಿಯೇ ಅನೇಕಬಾರಿ ಹೇಳಿದ್ದಾನೆ. ಇಲ್ಲಿಯೂ ಸಹ ಮನುಷ್ಯನನ್ನು ಗೊಂದಲದಲ್ಲಿರಿಸಿ ಕೆಲವರನ್ನು ತಪ್ಪುದಾರಿ ಹಿಡಿಯುವಂತೆ ಮಾಡುವುದಕ್ಕೆ (3–7) ಆಯತ್‌ನಲ್ಲಿಯೇ ಎರಡು ವಿಧಗಳಲ್ಲಿ ಹೇಳಿದ್ದಾನೆ. ಸೂಕ್ಷ್ಮ, ಸ್ಥೂಲ ಜ್ಞಾನವಿದೆಯೆಂದು ವಾಕ್ಯದಲ್ಲಿ ಹೇಳುತ್ತಾ, ಸೂಕ್ಷ್ಮ ಜ್ಞಾನವನ್ನು ತೆಗೆದುಕೊಂಡು ಬಹಳ ಮಂದಿ ಬೋಧಕರು ಇತರರನ್ನು ತಪ್ಪು ದಾರಿ ಹಿಡಿಸುತ್ತಿದ್ದಾರೆಂದು ಹೇಳುವುದರಿಂದ, ಆ ಮಾತನ್ನೇ ಆಸರೆಯಾಗಿ ತೆಗೆದುಕೊಂಡು ಸೂಕ್ಷ್ಮಜ್ಞಾನವನ್ನು ದೇವರೇ ಇಳಿದುಬಂದು ಹೇಳಿದರೂ ನಂಬದವರಾಗಿ ಮನುಷ್ಯರು ತಯಾರಾಗಿದ್ದಾರೆ. ಬಹಳ ಮಂದಿ ಮುಸ್ಲಿಮ್‌ರು ಮುತಷಾಬಿಹಾತ್ (ಸೂಕ್ಷ್ಮಜ್ಞಾನ) ವಾಕ್ಯಗಳನ್ನು ಸ್ವಲ್ಪವೂ ನಂಬದವರಾಗಿ ತಯಾರಾಗಿದ್ದಾರೆ. ಮುತಷಾಬಿಹಾತ್ ವಾಕ್ಯಗಳನ್ನು ಯಾರು ಹೇಳಿದರೂ ಅವುಗಳನ್ನು ನಂಬಬಾರದೆಂದು ನಿರ್ಣಯಿಸಿಕೊಂಡಿದ್ದಾರೆ. ದೇವರು ಆ ವಾಕ್ಯಗಳ ಜ್ಞಾನ ತನಗೇ ತಿಳಿದಿದೆಯೆಂದು ಯಾವ ಮನುಷ್ಯನಿಗೂ ತಿಳಿಯದೆಂದು ಹೇಳಿದ ಮಾತು ವಾಸ್ತವವೇ. ಆದರೇ ಅದೇ ವಾಕ್ಯದಲ್ಲಿ ಕೊನೆಯಲ್ಲಿ ಬುದ್ಧಿ ಶ್ರದ್ಧೆ ಇರುವವರು ತನ್ನ ಸೂಕ್ಷ್ಮಜ್ಞಾನವನ್ನು ಗ್ರಹಿಸುತ್ತಾರೆಂದು ಸಹ ಹೇಳಿದ್ದಾನೆ. ಈ ವಾಕ್ಯವನ್ನು ಅರ್ಥಮಾಡಿಕೊಂಡವರು ದೇವರು ಹೇಳಿದ ನಿದರ್ಶನ ವಾಕ್ಯಗಳನ್ನು ತಿಳಿದುಕೊಳ್ಳುತ್ತಿದ್ದಾರೆ, ಅರ್ಥ ಮಾಡಿಕೊಳ್ಳುತ್ತಿದ್ದಾರೆ.

ದೇವರು ಮನುಷ್ಯನಿಗೆ ಎರಡು ಮಾರ್ಗಗಳನ್ನು ತೋರಿಸಿ, ಎಲ್ಲಿ ಕಳುಹಿಸಬೇಕಾದವನನ್ನು ಅಲ್ಲೇ ಕಳುಹಿಸುತ್ತಿದ್ದಾನೆ. ದೇವರ ಸೂಕ್ಷ್ಮತೆಯನ್ನು ಗ್ರಹಿಸಿಕೊಳ್ಳದವರೆಲ್ಲರೂ ಅಜ್ಞಾನ ಮಾರ್ಗದಲ್ಲಿ ಹೋಗುತ್ತಾ, ಸರಿಯಾದ

ಸತ್ಯವಾದ ಜ್ಞಾನವನ್ನು ಹೇಳುವವರನ್ನೂ ಸಹ ಹೇಳನವಾಗಿ ಮಾತನಾಡುತ್ತಾ, ಅಜ್ಞಾನ ಮಾರ್ಗದಲ್ಲಿರುವ ತಾವು ಸರಿಯಾದ ಮಾರ್ಗದಲ್ಲಿ ಇದ್ದಾರೆಂದು ಅಂದುಕೊಳ್ಳುತ್ತಾ, ಸರಿಯಾದ ಜ್ಞಾನಮಾರ್ಗದಲ್ಲಿರುವವರನ್ನು ಅಜ್ಞಾನ ಮಾರ್ಗದಲ್ಲಿ ಇರುವಂತೆ ಅಂದುಕೊಳ್ಳುತ್ತಿದ್ದಾರೆ. ಇಂತಹ ವಿಧಾನ ಬಹಳ ಮಂದಿ ಮುಸ್ಲಿಮ್‌ರಲ್ಲಿ ಇದೆಯೆಂದು ಹೇಳಬಹುದು. ಆದ್ದರಿಂದ ಪ್ರತಿ ವಿಷಯದಲ್ಲಿಯೂ ನಾವು ಹೇಳುವುದು ಸರಿಯಾದ ಜ್ಞಾನ ಅಲ್ಲವೆಂದು ನಮ್ಮೊಂದಿಗೆ ಮಂಡಿಸುತ್ತಿದ್ದಾರೆ. ಆದರೂ ಅವರು ಮಾರ್ಗ ಕೆಟ್ಟವರೆಂದು ನಮಗೆ ಚೆನ್ನಾಗಿ ಅರ್ಥವಾಗಿದೆ. ಅವರ ವಿಷಯ ದೇವರೇ ನೋಡಿಕೊಳ್ಳುತ್ತಾನೆ. ನಾನು ಮಾತ್ರ ದೇವರು ಹೇಳಿಸಿರುವುದನ್ನು ಹೇಳುತ್ತಿದ್ದೇನೆ. ಹಾಗೆಯೇ ದೇವರು ಬರೆಸಿರುವುದನ್ನು ಬರೆಯುತ್ತಿದ್ದೇನೆ. ದೇವರ ಜ್ಞಾನ ದೇವರೇ ಹೇಳಬೇಕೇ ಹೊರತು ನಾನು ಹೇಳುವುದಕ್ಕೆ ಅನರ್ಹನು. ಆದರೇ ನಾನು ತಿಳಿದು ಏನೂ ಹೇಳದಿದ್ದರೂ, ನನ್ನಿಂದ ಎಷ್ಟೋ ಜ್ಞಾನ ರಹಸ್ಯಗಳನ್ನು ದೇವರೇ ಹೇಳಿಸುತ್ತಿದ್ದಾನೆ. ನಾನು ಕಾಣಿಸುವ ಗೊಂಬೆ ಮಾತ್ರವೇ. ಆಡಿಸುವ ಸೂತ್ರಧಾರಿ ಒಳಗಿದ್ದು ಮಾತನಾಡಿಸುತ್ತಿದ್ದಾನೆ, ಬರೆಯಿಸುತ್ತಿದ್ದಾನೆ. ಆದ್ದರಿಂದ ಮೇಲ್ನೋಟಕ್ಕೆ ಕಾಣಿಸುವ ನಾನು ಹೇಳುವುದು ಏನೆಂದರೆ! ಈ ಬರವಣಿಗೆ ನನ್ನದಲ್ಲ, ಈ ಬೋಧ ನನ್ನದಲ್ಲ. ಹೇಳುವವನು ಎಲ್ಲಾ ತಿಳಿದ ಆತ್ಮವೇಯೆಂದೂ, ಆತನಿಗೆ ತಿಳಿಯದಿರುವುದು ಏನೂ ಇಲ್ಲವೆಂದು, ಎಲ್ಲರಲ್ಲಿ ಪರ್ಯವೇಕ್ಷಕನಾಗಿ ಇರುವ ಆತನೇ ಎಲ್ಲರನ್ನೂ ಆಡಿಸುತ್ತಿದ್ದಾನೆಂದು ಹೇಳಬಲ್ಲೆವು. ಪ್ರತಿ ಮನುಷ್ಯ ಒಬ್ಬ ಪರ್ಯವೇಕ್ಷಕನನ್ನು ಹೊಂದಿದ್ದಾನೆ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ 86ನೇ ಸೂರಾ, 4ನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾರೆ. **(86–4) "ತನ್ನನ್ನು ನೋಡಿಕೊಳ್ಳುವವನು ಇಲ್ಲದಂತೆ ಯಾವ ಪ್ರಾಣಿಯೂ ಇಲ್ಲ."** ಈ ಮಾತಿನಲ್ಲಿ ನೋಡಿಕೊಳ್ಳುತ್ತಿರುವವನೇ ಪ್ರತಿ ಮನುಷ್ಯನನ್ನು ನಿಯಮಬದ್ಧವಾಗಿ ಆಡಿಸುತ್ತಿದ್ದಾನೆ. ಮನುಷ್ಯ ಗತದಲ್ಲಿ ಮಾಡಿಕೊಂಡ ಪಾಪಪುಣ್ಯಗಳು ಕರ್ಮಪತ್ರ ಎಂಬ ಗ್ರಂಥದಲ್ಲಿ ಲಿಖಿತವಾಗಿರುತ್ತವೆ. ಹಾಗೆ ಲಿಖಿತವಾಗಿರುವ ಕರ್ಮಪತ್ರದ ಪ್ರಕಾರ ಮನುಷ್ಯ ಶರೀರದಲ್ಲಿರುವ ಎರಡನೆಯವನೇ (ಆತ್ಮಯೇ) ಆತನಿಗೆ

ಕಾವಲಿಯಾಗಿ ಪರ್ಯವೇಕ್ಷಕನಾಗಿ, ಆಡಿಸುವವನಾಗಿ ಇದ್ದಾನೆ ಪ್ರತಿ ವಿಷಯದಲ್ಲಿಯೂ ಕರ್ಮವನ್ನು ಅನುಸರಿಸಿ ನಡೆಸುತ್ತಿರುವನು. ಹಾಗೆ ಶರೀರದಲ್ಲಿದ್ದು ಶರೀರದಲ್ಲಿ ಇರುವ ಜೀವಾತ್ಮನನ್ನು ನಡೆಸುವವನು ಆತ್ಮ ಎನ್ನುವವನೆಂದು ಉಳಿದ ಎರಡು ಗ್ರಂಥಗಳಲ್ಲಿ ಹೇಳಲಾಗಿದೆ. ನನ್ನಲ್ಲಿಯೂ ಸಹ ಆತ್ಮ ಎನ್ನುವವನು ನನ್ನನ್ನು ನಡೆಸುತ್ತಿದ್ದಾನೆಂದು ನನಗೆ ಸ್ಪಷ್ಟವಾಗಿ ತಿಳಿದಿದೆ. ಆದ್ದರಿಂದ ನನ್ನ ಪ್ರತಿ ಕದಲಿಕೆ, ಪ್ರತಿ ಮಾತು, ಪ್ರತಿ ಕೆಲಸ ನನ್ನದಲ್ಲ ನನ್ನನ್ನು ನಡೆಸುವ ಆತ್ಮ ಮಾಡುವುದೇ ಎಂದು ಹೇಳುತ್ತಿದ್ದೇವೆ. ನನ್ನ ಒಬ್ಬನ ವಿಷಯವೇ ಅಲ್ಲ, ಭೂಮಿ ಮೇಲೆ ಹುಟ್ಟಿರುವ ಪ್ರತಿ ಮನುಷ್ಯನನ್ನು ಒಳಗೆ ಇದ್ದು ನಡೆಸುವವನು ಇದ್ದಾನೆ. ಆದ್ದರಿಂದ ಖುರಾನ್‌ನಲ್ಲಿ 86–4ನೇ ವಾಕ್ಯದಲ್ಲಿ ಪ್ರತಿ ಒಬ್ಬನಲ್ಲಿ ಅವನನ್ನು ನೋಡಿಕೊಳ್ಳುವವನು ಇದ್ದಾನೆಂದು ಹೇಳಿದ್ದಾನೆ.

**ಪ್ರಶ್ನೆ :– ನೀವು ಮೂರು ಮತಗಳನ್ನು ಕುರಿತು ಧಾರಾಳವಾಗಿ ಹೇಳುತ್ತಿದ್ದೀರ. ಹಾಗೆಂದು ನೀವು ಹೇಳುವವೆಲ್ಲಾ ನಿಜವೇನಾ! ಎಂದು ಅನುಮಾನವೂ ಸಹ ಸ್ವಲ್ಪ ಇದೆ. ನಿಮ್ಮ ಮಾತು ನಂಬಬೇಕೆನ್ನುತ್ತೀರಾ?**

**ಉತ್ತರ :–** ಹೇಳುವುದಷ್ಟೇ ನನ್ನ ಜವಾಬ್ದಾರಿ, ನಂಬುವುದು ನಂಬದಿರುವುದು ಅದು ನಿನ್ನ ಇಷ್ಟ. ನಾನು ಜ್ಞಾನವನ್ನು ಜ್ಞಾಪಕ ಮಾಡುವವನು ಮಾತ್ರವೇ, ನೀವು ನಾನು ಹೇಳುವುದೆಲ್ಲಾ ನಂಬಿರೆಂದು ನಾನು ಹೇಳಲಿಲ್ಲ. ನಿನಗೆ ಇಷ್ಟವಾದರೇ ನಂಬು, ಇಷ್ಟವಿಲ್ಲದಿದ್ದರೇ ಬಿಟ್ಟುಬಿಡು. ನಿನ್ನನ್ನು ಜ್ಞಾನಿಯಾಗಿ ಮಾಡಬೇಕಾದವನು, ಅಜ್ಞಾನಿಯಾಗಿ ಮಾಡಬೇಕಾದವನು ದೇವರೇ.

**ಪ್ರಶ್ನೆ :– 29–44 ಮತ್ತು 2–29 ವಾಕ್ಯಗಳಲ್ಲಿ ಎಷ್ಟೋ ನಿದರ್ಶನ ಪರಮಾರ್ಥವಿದೆಯೆಂದು ವಾಕ್ಯದಲ್ಲಿ ಇದೆ. ಅಲ್ಲಿ ಹೇಳಿರುವುದು ಭೂಮಿ, ಆಕಾಶಗಳನ್ನೇ ಅಲ್ಲವೆ! ಆ ಎರಡು ಎಲ್ಲರಿಗೂ ಕಾಣಿಸುವವೇ ಅಲ್ಲವೆ! ಅದರಲ್ಲಿ ದೊಡ್ಡ ರಹಸ್ಯವಾಗಲೀ, ನಿದರ್ಶನವಾಗಲೀ, ಪರಮಾರ್ಥವಾಗಲೀ ನಮಗೆ ಏನೂ ಕಾಣಿಸಲಿಲ್ಲವೆ?**

**ಉತ್ತರ :–** ಗ್ರಂಥವನ್ನು ಓದುವ ಪ್ರತಿಯೊಬ್ಬನಿಗೂ ವಿಷಯ ಅರ್ಥವಾದರೇ, ಹೇಳುವವನೊಂದಿಗೆ ಕೆಲಸವೇ ಇಲ್ಲ! ಹೇಳುವವನು ಗುರುವು. ಪ್ರತಿಯೊಂದು ಗುರುವು ಹೇಳಬೇಕಾಗಿರುವುದೇ ಮನುಷ್ಯ ಕೇಳಿ ತಿಳಿದುಕೊಳ್ಳಬೇಕಾಗಿದ್ದೇ.

**ಪ್ರಶ್ನೆ :– ಗುರುವು ಮನುಷ್ಯ ಅಲ್ಲವಾ?**

**ಉತ್ತರ :–** ಪ್ರತಿಯೊಬ್ಬನು ಮನುಷ್ಯನೇ, ಆದರೇ ಅಪರೂಪವಾಗಿ ಭೂಮಿ ಮೇಲೆ ಎಲ್ಲೋ ಒಂದು ಕಡೆ ಮನುಷ್ಯ ವೇಷದಲ್ಲಿ ಮನುಷ್ಯನ ಹಾಗೆ ಗುರುವು ಸಹ ಇರುತ್ತಾನೆ. ಗುರುವು ಎಂದರೆ ದೇವರೊಂದರ ಸಾಕಾರರೂಪವೆಂದು ಹೇಳಬಹುದು. ನಿರಾಕಾರವಾಗಿ ಕಾಣಿಸದಂತಿರುವವನು ದೇವರು. ದೇವರೊಂದರ ಅಂಶ, ದೇವರೊಂದರ ಶಕ್ತಿ ಭೂಮಿ ಮೇಲೆ ಮನುಷ್ಯನ ಹಾಗೆ ಹುಟ್ಟಿ, ತನ್ನ ಜ್ಞಾನವನ್ನು ಕುರಿತು ತಾನೇ ಹೇಳಬೇಕಾಗಿದೆ. ಹಾಗೆ ಹುಟ್ಟಿದವನು ನೋಡುವುದಕ್ಕೆ ಮನುಷ್ಯನೇ ಆದರೂ ಆತನು ಎಲ್ಲರ ಹಾಗೆ ಮನುಷ್ಯನಲ್ಲ. ಆತನನ್ನು ಪ್ರತ್ಯೇಕವಾಗಿ ಬಂದಿರುವವನು ಎಂದಾಗಲೀ, ಭಗವಂತನು ಎಂದಾಗಲೀ, ಗುರುವು ಎಂದಾಗಲೀ ಎನ್ನಬಹುದು. ಗುರುವು ಎಂದರೂ, ಭಗವಂತನೂ ಎಂದರೂ, ಇಬ್ಬರೂ ಒಂದೇ ಎಂದು ತಿಳಿಯಬೇಕು. ಅಂತಹವನನ್ನು ಮನುಷ್ಯನಾಗಿ ಲೆಕ್ಕಿಸಬಾರದು. ಮೇಲ್ನೋಟಕ್ಕೆ ಮನುಷ್ಯನ ಹಾಗೆ ಇದ್ದರೂ ಆತನು ಎಲ್ಲ ವಿಷಯಗಳಲ್ಲಿ ಪ್ರತ್ಯೇಕವಾಗಿ ಇರುತ್ತಾನೆ. ಆತನು ಎಂತಹ ದೊಡ್ಡ ಜ್ಞಾನ ರಹಸ್ಯವನ್ನಾದರೂ ಹೇಳಬಲ್ಲನು. ಮನುಷ್ಯನಿಗೆ ತಿಳಿಯದ ಜ್ಞಾನ ಗುರುವಿಗೇ ತಿಳಿಯುತ್ತದೆ. ಅಂತಹವನನ್ನೇ ಬೈಬಲ್‌ನಲ್ಲಿ ಯೋಹಾನ್ ಸುವಾರ್ತೆಯಲ್ಲಿ **'ಆದರಣಕರ್ತ'** ಎಂದು ಹೇಳಿದ್ದಾರೆ.

**ಪ್ರಶ್ನೆ :– ನಮ್ಮ ಮುಸ್ಲಿಮ್‌ರು ಮುಹಮ್ಮದ್ ಪ್ರವಕ್ತರನ್ನು ಬೈಬಲ್‌ನಲ್ಲಿ ಯೇಸು ಹೇಳಿದ ಆದರಣಕರ್ತನಾಗಿ ಹೇಳುತ್ತಿರುವಾಗ ಕೇಳಿದ್ದೇವೆ, ನೀವೇನೆನ್ನುತ್ತೀರ. ಪ್ರವಕ್ತರವರು ಆದರಣ ಕರ್ತನೇ ಅಲ್ಲವೆ! ಆತನು ಗುರುವೇ ಅಲ್ಲವೆ!**

**ಉತ್ತರ :–** ಪ್ರವಕ್ತರವರನ್ನು ನಾವು ಹೇಗೆ ಹೋಲಿಸಿಕೊಂಡರೂ ತಪ್ಪಿಲ್ಲ.

ಆದರೇ ಖುರಾನ್ ಗ್ರಂಥದಲ್ಲಿ ಕೆಲವು ಆಯತ್‌ಗಳಲ್ಲಿ ಪ್ರವಕ್ತ ಎಂತಹ ಮಹತ್ವ ಇಲ್ಲದವನೆಂದೂ, ಪ್ರವಕ್ತ ಪ್ರಜೆಗಳನ್ನು ಹೆಚ್ಚರಿಸುವುದಕ್ಕೆ ಮಾತ್ರ ಬಂದಿರುವವನೆಂದೂ, ಪ್ರವಕ್ತ ಯಾವ ಜ್ಞಾನ ತಿಳಿಯದವನೆಂದೂ, ಜಿಬ್ರಯೇಲ್ ಹೇಳಿದ ಜ್ಞಾನವನ್ನು ಮನುಷ್ಯರಿಗೆ ಹೇಳುವುದಕ್ಕೆ ಬಂದಿರುವ ಪ್ರವಕ್ತಯೆಂದೂ, ದೇವರು ಮುಹಮ್ಮದ್‌ರವರನ್ನು ಕೊನೆಯ ಪ್ರವಕ್ತರಾಗಿ ಆಯ್ಕೆ ಮಾಡಿಕೊಂಡಿದ್ದಾನೆಂದು ತಿಳಿಯುತ್ತಿದೆ. ಪ್ರವಕ್ತರವರು ಎಷ್ಟೋ ಸಾತ್ತ್ವಿಕನು, ಓದುಬರದಿದ್ದರೂ ಎಷ್ಟೋ ದೊಡ್ಡ ಮೇಧಾವಿ.

ಎಷ್ಟೋ ಸತ್‌ಪುರುಷನಾದ ಮುಹಮ್ಮದ್‌ರವರನ್ನು ದೇವರು ಸ್ವೀಕರಿಸಿ ಜಿಬ್ರಯೇಲ್‌ನಿಂದ ಜ್ಞಾನವನ್ನು ಹೇಳಿಸಿದ್ದಾನೆ. ಪ್ರವಕ್ತರವರು ಜ್ಞಾನ ವಿಷಯದಲ್ಲಿ ಹೆಚ್ಚರಿಸುವವನೇ ಎಂದು ಖುರಾನ್ ಗ್ರಂಥದಲ್ಲಿ ಹೇಳಿರುವುದರಿಂದ ಅದಕ್ಕಿಂತ ಹೆಚ್ಚಾಗಿ ಹೋಲಿಸಿಕೊಳ್ಳಬಾರದು. 'ಆದರಣಕರ್ತ' ಆದವನು ಸ್ವತಃವಾಗಿ ಜ್ಞಾನ ಹೇಳುವವನಾಗಿ ಇರುವನು. ಆದ್ದರಿಂದ ಗುರುವನ್ನು ಆದರಣಕರ್ತಯೆಂದು ಎನ್ನಬಹುದು.

**ಪ್ರಶ್ನೆ :- ಪ್ರವಕ್ತರವರು ಜಿಬ್ರಯೇಲ್ ಹೇಳಿದ ಜ್ಞಾನವನ್ನು ಅಂದಿನ ಜನರಿಗೆ ಹೇಳಿದ್ದಾನೆ. ಅದೇ ಜ್ಞಾನವೇ ಖುರಾನ್ ಗ್ರಂಥವಾಗಿ ಇಂದು ನಮ್ಮ ಮುಂದೆ ಇದೆ. ಅದರಲ್ಲಿ 'ಸೂಕ್ಷ್ಮವಾದ ವಾಕ್ಯಗಳು ಕೆಲವು, ಸ್ಥೂಲವಾದ ವಾಕ್ಯಗಳು ಕೆಲವು ಇವೆ' ಎಂದು ಹೇಳಿದ್ದಾರೆ. ಅದರಲ್ಲಿ ಯಾವುವು ಸೂಕ್ಷ್ಮವಾದ ವಾಕ್ಯಗಳು, ಯಾವುವು ಸ್ಥೂಲವಾದ ವಾಕ್ಯಗಳು ಎಂದು ಗ್ರಹಿಸಬಹುದು?**

**ಉತ್ತರ :-** ಈ ವಿಷಯ ನಾವು **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ ಗ್ರಂಥದಲ್ಲಿ ವಿವರವಾಗಿ ಬರೆದಿದ್ದೇವೆ. ಆ ಗ್ರಂಥವನ್ನು ಓದಿದರೇ ನಿಮಗೆ ಸ್ಥೂಲ, ಸೂಕ್ಷ್ಮ ವಿಷಯಗಳನ್ನು ಕುರಿತು ಪೂರ್ತಿಯಾಗಿ ಅರ್ಥವಾಗುತ್ತದೆ. ಆದರೂ ಉದಾಹರಣೆಗೆ ಸ್ವಲ್ಪ ಮಾತ್ರ ಹೇಳುವೆನು ಕೇಳಿ. ಖುರಾನ್ ಗ್ರಂಥದಲ್ಲಿ ಸೂರಾ2, ಆಯತ್ 187ರಲ್ಲಿ ಗಂಡ ಹೆಂಡತಿ ಸಮ್ಮಿಲನ ವಿಷಯವನ್ನು

ಹೇಳಿದ್ದಾನೆ. ಆರಾಧನೆ ದಿನಗಳಲ್ಲಾಗಲೀ, ಖುರಾನ್ ಅವತರಿಸಿದ ರಂಜಾನ್ ತಿಂಗಳಲ್ಲಾಗಲೀ ನೀವು ಪವಿತ್ರವಾಗಿ ಇರಬೇಕೆಂದು ಹೇಳುತ್ತಾ ಗಂಡ ಹೆಂಡತಿ ಸಮ್ಮಿಲನ ರಾತ್ರಿ ಹೊತ್ತು ಮಾತ್ರ ಇರಬೇಕೆಂದು ಹಗಲು ಹೊತ್ತು ಇರಬಾರದೆಂದು ಹೇಳಿದ್ದಾರೆ. ಮುಹಮ್ಮದ್ ಪ್ರವಕ್ತರವರು ಜಿಬ್ರಯೇಲ್ ಹೇಳಿದ ವಿಷಯವನ್ನೇ ಹೇಳಿದ್ದಾನೆ. ಅದರಲ್ಲಿ ಎಲ್ಲಿ ನೋಡಿದರೂ ಸ್ಥೂಲ ಜ್ಞಾನವೇ ಇದೆ. "ರಾತ್ರಿ ಹೊತ್ತು ನೀವು ಏನು ಅನುಭವಿಸಿದರೂ ಫರವಾಗಿಲ್ಲ ಹಗಲು ಹೊತ್ತು ಮಾತ್ರ ನಾವು ಹೇಳಿದಂತೆ ಉಪವಾಸವಿರಿ ಎಂದು ಹೇಳಿದ್ದಾನೆ. ಆದರೇ ಖುರಾನ್‌ನಲ್ಲಿ ಇರುವ ಸ್ಥೂಲವಾಕ್ಯವೂ ಸಹ ಮನುಷ್ಯರಿಗೆ ಅರ್ಥವಾಗಲಿಲ್ಲ. ದೇವರು ಅಲ್ಲಿ ಒಂದು ಹೇಳಿದ್ದರೇ ಮನುಷ್ಯರು ಮತ್ತೊಂದು ಮಾಡುತ್ತಿದ್ದಾರೆ. ಈ ವಿಧವಾಗಿ ಸ್ಥೂಲ ವಿಷಯಗಳೇ ಅರ್ಥವಾಗದಿರುವಾಗ ಸೂಕ್ಷ್ಮ ವಿಷಯಗಳು ಹೇಗೆ ಅರ್ಥವಾಗುತ್ತವೆ. ಆದ್ದರಿಂದ ಗುರುವು ಇಲ್ಲವೆ ಭಗವಂತನು ಇಲ್ಲವೆ ಆದರಣಕರ್ತ ಬಂದು ವಿವರಿಸಿ ಹೇಳುವವರೆಗು ಸೂಕ್ಷ್ಮವಾದ ವಿಷಯಗಳು ಅರ್ಥವಾಗುವುದಿಲ್ಲ.

ಈಗ ವಾಸ್ತವ ವಿಷಯಕ್ಕೆ ಬರೋಣ. 29–44 ನೇ ವಾಕ್ಯದಲ್ಲಿ **(29–44) "ಅಲ್ಲಾಹ್ ಭೂಮಿಯನ್ನು, ಆಕಾಶಗಳನ್ನು ಸತ್ಯಬದ್ಧವಾಗಿ ಸೃಷ್ಠಿಸಿದ್ದಾನೆ. ಆಕಾಶವನ್ನು ಭೂಮಿಯನ್ನು ಪರಮಾರ್ಥದಿಂದ ಸೃಷ್ಠಿಸಿದ್ದಾನೆಂದು ತಿಳಿದರೇ ಇದರಲ್ಲಿ ದೊಡ್ಡ ನಿದರ್ಶನ ಸಿಗುತ್ತದೆ"** ಎಂದು ಇದೆ. ಆದರೇ ಇದರಲ್ಲಿ 'ಭೂಮಿ, ಆಕಾಶಗಳನ್ನು' ಎಂದು ಅಂದಾಗ ಭೂಮಿ ಆಕಾಶ ಸ್ಥೂಲವಾದ ಕಣ್ಣಿಗೆ ಕಾಣಿಸುವ ವಿಷಯವೆ ಅಲ್ಲವೆ! ಎಂದು ಯಾರಾದರೂ ಅಂದುಕೊಳ್ಳುವ ಅವಕಾಶ ಇದೆ. ಅಲ್ಲಿ ಹೇಳಿರುವುದು ಒಂದು ಆಕಾಶವನ್ನು ಅಲ್ಲ **'ಆಕಾಶಗಳು'** ಎಂದು ಹೇಳಿದ್ದಾನೆ. ನಮಗೆ 'ಆಕಾಶ' ಕಾಣಿಸುತ್ತಿದೆಯಾಗಲೀ, 'ಆಕಾಶಗಳು' ಕಾಣಿಸಲಿಲ್ಲ. ಈ ಮಾತಿನಿಂದಲೇ ಇದರಲ್ಲಿ ಕಾಣಿಸದ ಜ್ಞಾನವಿದೆಯೆಂದು ತಿಳಿದುಹೋಗುತ್ತಿದೆ. ನಾವು ಚೆನ್ನಾಗಿ ಆಲೋಚಿಸಿದರೇ ಖುರಾನ್ ಗ್ರಂಥ ತೌರಾತ್ ಗ್ರಂಥವೊಂದರ ಆಧಾರದಿಂದ ಹೇಳಲಾಗಿದೆ. ಆ ವಿಷಯ ಖುರಾನ್ ಗ್ರಂಥದಲ್ಲಿಯೇ ಇದೆ.

ತೌರಾತ್ ಗ್ರಂಥವನ್ನು ಖುರಾನ್ ಗ್ರಂಥ ಧೃಢೀಕರಿಸುತ್ತಿದೆಯೆಂದು ಹೇಳಿದಾಗಲೇ ತೌರಾತ್ ಗ್ರಂಥದಲ್ಲಿನ ಜ್ಞಾನವೇ ಖುರಾನ್‌ನಲ್ಲಿ ಇದೆಯೆಂದು ತಿಳಿದುಹೋಗುತ್ತಿದೆ. ತೌರಾತ್ ಗ್ರಂಥದಲ್ಲಿ ಹೇಳಿದ ವಾಕ್ಯಗಳೆಲ್ಲವೂ ಶರೀರ ಅಂತರಂಗದಲ್ಲಿಯೇ ಹೇಳುವುದು ನಡೆದಿದೆ. ಕೊನೆಗೆ ದೇವರು ಮನುಷ್ಯ ಶರೀರದಲ್ಲಿಯೂ ಸಹ ಇದ್ದಾನೆಂದು ಹೇಳುವುದಾಗಿದೆ. ಅದೇ ಜ್ಞಾನವನ್ನೇ ಖುರಾನ್‌ನಲ್ಲಿ ಹೇಳುವುದರಿಂದ ಖುರಾನ್‌ನಲ್ಲಿನ ಆಯತ್‌ಗಳು ಶರೀರದಲ್ಲಿ ಅಡಗಿರುವ ಜ್ಞಾನವನ್ನೇ ಹೇಳಿವೆಯೆಂದು ತಿಳಿಯಬಹುದು. ಭಗವದ್ಗೀತೆ ಪ್ರಕಾರವಾದರೂ, ಖುರಾನ್ ಪ್ರಕಾರವಾದರೂ 29–44 ರಲ್ಲಿ ಇರುವ ಜ್ಞಾನವೇ ಸೂಕ್ಷ್ಮವಾಗಿರುವುದೆಂದೂ, ಶರೀರದಲ್ಲಿ ಅಡಗಿರುವ ಜ್ಞಾನವೆಂದು ತಿಳಿದು ಹೋಗುತ್ತಿದೆ. 'ಭೂಮಿ, ಆಕಾಶಗಳನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ದೇವರು ಸೃಷ್ಠಿಸಿದ್ದಾನೆ' ಎನ್ನುವುದು ಸತ್ಯವೇ ಆದರೂ ಮೊದಲು ಆಕಾಶಗಳನ್ನು ಕುರಿತು ತಿಳಿದುಕೊಳ್ಳಬೇಕು. ಆ ಪ್ರಯತ್ನದಲ್ಲಿ ಖುರಾನ್‌ನಲ್ಲೇ ಸಪ್ತ ಆಕಾಶಗಳೆಂದು ಬಹಳ ಕಡೆ ಹೇಳಲಾಗಿದೆ. ಅದನ್ನನುಸರಿಸಿ ಏಳು ಆಕಾಶಗಳಿವೆಯೆಂದೂ, ಏಳು ಆಕಾಶಗಳು ಹೊರಗಿನ ಪ್ರಪಂಚದಲ್ಲಿ ಇಲ್ಲವೆಂದೂ, ಒಳಗಿನ ಪ್ರಪಂಚವಾದ ಶರೀರದಲ್ಲಿಯೇ ಇವೆಯೆಂದು ಅರ್ಥಮಾಡಿಕೊಳ್ಳಬೇಕು. ಈ ಮಾತಿಗೆ ಮೂಲ ಭಗವದ್ಗೀತೆಯಲ್ಲಿರುವ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಇದೆಯೆಂದು ತಿಳಿಯುತ್ತಿದೆ. **"ಮಹರ್ಷಯ ಸಪ್ತ"** ಎಂಬ ಪದವನ್ನು ತೆಗೆದುಕೊಂಡು ನೋಡಿದರೇ ನಮ್ಮ ಶರೀರದಲ್ಲಿರುವ ಏಳು ಆಕಾಶಗಳ ವಿವರ ತಿಳಿಯಬಲ್ಲದು.

ಸೂರಾ 29–44 ನೇ ಆಯತ್ ಪ್ರಕಾರ ಏಳು ಆಕಾಶಗಳು ಹೊರಗೆ ಎಲ್ಲೂ ಇಲ್ಲ. ಅದರೇ ಏಳು ಆಕಾಶಗಳೆಂಬ ವಿಧಾನ ಶರೀರದ ಒಳಗೆ ಇದೆ. ಶರೀರದೊಳಗೆ ತಲೆ ಮೊದಲುಗೊಂಡು ಗುದಸ್ಥಾನದವರೆಗು ಇರುವ ಬೆನ್ನುಮೂಳೆಯಲ್ಲಿ ಬೆನ್ನೆಲುಬು ಎಂಬ ದೊಡ್ಡ ನರವೂ ಇದೆ. ಬೆನ್ನೆಲುಬು ಎಂಬ ದೊಡ್ಡ ನರ ಮೆದುಳಿನಿಂದ ಹೊರಟು ಬೆನ್ನೆಲುಬಿನಲ್ಲಿ ವ್ಯಾಪಿಸಿ ಮಧ್ಯದಲ್ಲಿ

ಕೆಳಗೆ ಕೊನೆಯವರೆಗು ಇರುತ್ತದೆ. ಹಾಗೆ ವ್ಯಾಪಿಸಿದ ನರ ಒಟ್ಟು ಏಳು ಭಾಗಗಳಾಗಿ ವಿಭಜಿಸಲಾಗಿದೆ. ಬೆನ್ನೆಲುಬಿನ ಮೇಲಿನ ಭಾಗವಾದ ಮೆದುಳು ದೊಡ್ಡ ನಾಡೀ ಕೇಂದ್ರವಾಗಿ ಇದೆ. ಉಳಿದ ಆರು ಸ್ಥಾನಗಳಲ್ಲಿ ಬೆನ್ನೆಲುಬು ಎಂಬ ನರದಲ್ಲಿ ಉಳಿದ ಆರುಕಡೆ ಆರು ನಾಡೀ ಕೇಂದ್ರಗಳು ಇವೆ. ಒಟ್ಟು ಬೆನ್ನೆಲುಬು ಏಳು ನಾಡೀ ಕೇಂದ್ರಗಳಾಗಿ ವಿಭಜಿಸಲಾಗಿದೆ. ಈ ಏಳು ನಾಡೀಕೇಂದ್ರಗಳಿಂದ ಶರೀರದಲ್ಲಿನ ಒಟ್ಟು ಕೆಲಸಗಳು ನಡೆಯುವಂತೆ ಏಳು ಕೇಂದ್ರಗಳಿಂದ ಚಿಕ್ಕ ಚಿಕ್ಕ ನರಗಳು ಶರೀರವೆಲ್ಲಾ ವ್ಯಾಪಿಸಿವೆ. ಏಳು ನಾಡೀ ಕೇಂದ್ರಗಳಲ್ಲಿ ಆತ್ಮಶಕ್ತಿ ಇರುವಾಗ ಏಳನೇ ಕೇಂದ್ರದಲ್ಲಿ ಪರಮಾತ್ಮ ಶಕ್ತಿ (ದೇವರು) ವಾಸವಾಗಿದ್ದಾನೆ. ಈ ರೀತಿ ಒಂದು ಸಜೀವ ಶರೀರದಲ್ಲಿ ಏಳು ಆಕಾಶಗಳೆಂಬ ಏಳು ನಾಡೀಕೇಂದ್ರಗಳು ಇವೆ. ಈ ಏಳು ನಾಡೀ ಕೇಂದ್ರಗಳನ್ನೇ ಏಳು ಆಕಾಶಗಳೆಂದು ಖುರಾನ್ ಗ್ರಂಥದಲ್ಲಿ ಅನೇಕಬಾರಿ ಹೇಳಲಾಗಿದೆ. ಇದನ್ನು ಡಿಜೈನ್ ಮಾಡಿದವನು, ತಯಾರಿಸಿದವನು ಅಲ್ಲಾನೇ (ದೇವರೇ). ಆದ್ದರಿಂದ (29–44) ಆಯತ್‌ನಲ್ಲಿ **"ಅಲ್ಲಾಹ್ ಆಕಾಶಗಳನ್ನು ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಠಿಸಿದ್ದಾನೆ"** ಎಂದು ಹೇಳಿದ್ದಾನೆ. ಅದೇ ವಾಕ್ಯದಲ್ಲಿಯೇ ಇರುವ ಏಳು ಆಕಾಶಗಳನ್ನು ಅಲ್ಲದೆ ಭೂಮಿ ಏನೆಂದು ಯೋಚಿಸಿದರೇ, ನಾಡೀ ಕೇಂದ್ರಗಳಿಂದ ಶಕ್ತಿ ಪ್ರವಹಿಸುವ ಶರೀರವೆಲ್ಲವೂ ಭೂಮಿಯಾಗಿಯೇ ಲೆಕ್ಕಿಸಲಾಗುತ್ತದೆ. ಶರೀರವೆಂಬ ಭೂಮಿಯನ್ನು ನಾಡೀಕೇಂದ್ರಗಳನ್ನು ಆಕಾಶಗಳನ್ನು ದೇವರು ಸೃಷ್ಠಿಸಿದ್ದಾನೆಂದು ನೇರವಾಗಿ ಹೇಳದೆ, ಆಕಾಶಗಳನ್ನು ಭೂಮಿಯನ್ನು ಅಲ್ಲಾಹ್ ಸೃಷ್ಠಿಸಿದ್ದಾನೆಂದು ಅದರಲ್ಲಿ ನಿದರ್ಶನವಿದೆಯೆಂದು ಮರೆಯಲ್ಲಿ ಹೇಳಿದ್ದಾನೆ. ಭೂಮಿ ಯಾವುದಾಗಿರುವುದೂ, ಆಕಾಶಗಳು ಯಾವುದಾಗಿರುವುದೂ ತಿಳಿಯುವುದೇ **ಪರಮಾರ್ಥ** ಎಂದಿದ್ದಾರೆ. ಶರೀರದಲ್ಲಿ ಎಷ್ಟೋ ದೊಡ್ಡದಾದ ಜ್ಞಾನ ಮಿಳಿತವಾಗಿರುವುದರಿಂದ **ಸತ್ಯಬದ್ಧವಾಗಿ** ತಯಾರು ಮಾಡಿದ್ದೇನೆಂದು ಹೇಳಿದ್ದಾನೆ. ಶರೀರದಲ್ಲಿ ಆಕಾಶಗಳು ಭೂಮಿ ಕಾಣಿಸದಂತಿರುವುದರಿಂದ **'ನಿದರ್ಶನ'** ಎಂದು ಸಹ ಹೇಳಿದ್ದಾರೆ.

ಈಗ ತಿಳಿಯುವ ವಿಷಯವನ್ನು ಗ್ರಹಿಸಲಾರದೇ ಹೋದರೇ, ಅಂತಹವರು ಪರಮಾರ್ಥವನ್ನು ತಿಳಿಯಲಾರರು, ನಿದರ್ಶನವನ್ನೂ ತಿಳಿಯಲಾರರು. ದೇವರು ಈ ವಿಷಯವನ್ನು ಎಂದರೆ ತನ್ನ ಜ್ಞಾನ ವಿಷಯವನ್ನು ಆರಂಭದಲ್ಲೇ ತಿಳಿಸುತ್ತಾ, ಖುರಾನ್ ಗ್ರಂಥದಲ್ಲಿ ಸೂಕ್ಷ್ಮ ಜ್ಞಾನ ವಿಷಯಗಳು ಇವೆಯೆಂದೂ, ಅಂತಹ ಸೂಕ್ಷ್ಮಜ್ಞಾನವನ್ನು ಬುದ್ಧಿ, ಶ್ರದ್ಧೆ ಇರುವವರು ಮಾತ್ರವೇ ಗ್ರಹಿಸಬಲ್ಲರೆಂದು ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ಸೂಕ್ಷ್ಮ ವಿಷಯಗಳ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂದು ಮೊದಲೇ ಹೇಳಿದ್ದಾನೆ. ಶರೀರದಲ್ಲಿ ಸ್ಮೃತಿ, ಜ್ಞಾನ, ಊಹೆ ದೇವರಿಂದಲೇ ಕಲುಗುತ್ತದೆಂದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 15ನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ ಸರ್ವಸ್ಯ ಚಾಹಂ ಹೃದಿ ಸನ್ನಿ ವಿಷ್ಟೋ ಮತ್ತಃ ಸ್ಮೃತಿರ್ ಜ್ಞಾನ ಮಪೋಹನಂಚ।**
**ವೇದೈಶ್ಚ ಸರ್ವೈರಹ ಮೇವ ವೇದ್ಯೋ ವೇದಾಂತ ಕೃದ್ವೇದವಿ ದೇವ ಚಾಹಮ್॥**

**ಭಾವಾರ್ಥ :– "ನಾನು ಸಖಲ ಜೀವರಾಶಿಗಳ ಹೃದಯವೆಂಬ ಬ್ರಹ್ಮನಾಡಿ ಇಲ್ಲವೆ ಬೆನ್ನೆಲುಬಿನಲ್ಲಿ ಇದ್ದೇನೆ. ನನ್ನಿಂದಲೇ ಸ್ಮೃತಿ, ಜ್ಞಾನ, ಊಹೆ ಕಲುಗುತ್ತಿದೆ. ವೇದಗಳೆಲ್ಲವೂ ನನ್ನನ್ನೇ ತಿಳಿಸುತ್ತಿವೆ. ವೇದ ಫಲದಾತನು ಸಹ ನಾನೇ"** ಎಂದು ದೇವರು ತನ್ನ ಶ್ಲೋಕದಲ್ಲಿ ಹೇಳಿದ್ದಾನೆ. ಇದನ್ನನುಸರಿಸಿ ಅವಶ್ಯಬಂದಾಗ ಮನುಷ್ಯ ಶರೀರದಿಂದ ದೇವರೇ ತನ್ನ ಜ್ಞಾನವನ್ನು ತಿಳಿಸುವನೆಂದು ತಿಳಿಯುತ್ತಿದೆ. ಈಗಲೂ ಸಹ ದೇವರು ನನಗೆ ತಿಳಿಸುವ ಜ್ಞಾನವೇ ನಿಮಗೆ ಹೇಳುತ್ತಿದ್ದೇನೆ. ದೇವರ ಜ್ಞಾನ ದೇವರಿಗೆ ಹೊರತು ಇತರ ಮಾನವರಿಗೆ ಯಾರಿಗೂ ತಿಳಿಯದೆಂದು ಖುರಾನ್ ಗ್ರಂಥದಲ್ಲಿ ಸೂರಾ 3, ಆಯತ್ 7 ರಲ್ಲಿ ತಿಳಿಸಿದ್ದಾನೆ. ಯಾವ ಮನುಷ್ಯನ ಮೇಲೆಯೂ ನನ್ನ ಜ್ಞಾನವನ್ನು ಪ್ರಸರಿಸುವಂತೆ ಮಾಡಲಿಲ್ಲವೆಂದು ಸೂರಾ 6, ಆಯತ್ 91ರಲ್ಲಿಯೂ ಸಹ ತಿಳಿಸಿದ್ದಾನೆ.

ದೇವರ ಜ್ಞಾನ ದೇವರು ತಿಳಿಸಿದರೇನೆ ಮನುಷ್ಯರಾದ ನಮಗೆ ತಿಳಿಯುತ್ತದೆ. ಸೂರಾ 29, ಆಯತ್ 44ರಲ್ಲಿ ಇರುವ ಸಮಾಚಾರ ಪೂರ್ತಿ ಸೂಕ್ಷ್ಮ ಜ್ಞಾನದಿಂದ ಕೂಡಿಕೊಂಡಿರುವುದಾಗಿ ಇದೆ. ಇಲ್ಲಿ ಇರುವ ಜ್ಞಾನ ವಿಷಯ ಶರೀರ ಅಂತರ್ಭಾಗಗಳಲ್ಲಿ ಕಾಣಿಸದಂತೆ ಇರುವುದರಿಂದ ಇದು ನಿದರ್ಶನ ಜ್ಞಾನವೆಂದು ವಾಕ್ಯದಲ್ಲಿ ಹೇಳಿದ್ದಾರೆ. ಕಾಣಿಸುವ ಭೂಮಿ ಆಕಾಶಗಳಿಗಿಂತ ಬೇರೆಯಾದ ಅರ್ಥದಿಂದ ಕೂಡಿಕೊಂಡಿರುವುದರಿಂದ ಪರ+ಅರ್ಥ = ಪರಮಾರ್ಥದಿಂದ ಕೂಡಿಕೊಂಡಿದೆಯೆಂದು ಹೇಳಿದ್ದಾರೆ.

ಪರಮಾರ್ಥವೆಂದರೆ ನೀವು ಅಂದುಕೊಂಡ ಅರ್ಥವಲ್ಲವೆಂದು, ಸ್ಪಷ್ಟವಾಗಿ ತಿಳಿದುಹೋಗುತ್ತಿದೆ. ಅದರ ಪ್ರಕಾರ ನಾವು ಅಂದುಕೊಂಡ ಆಕಾಶವಲ್ಲ, ಹಾಗೇ ನಾವು ಅಂದುಕೊಂಡ ಭೂಮಿಯೂ ಅಲ್ಲ ಎಂದು ತಿಳಿದುಹೋಗಿದೆ. ಅದೇನೋ ನಮ್ಮ ಶರೀರದಲ್ಲಿನ ಚಿದಂಬರ ರಹಸ್ಯವೆಂದು ತಿಳಿದುಹೋಗಿದೆ. ಚಿದಂಬರ ರಹಸ್ಯವೆಂಬ **"ಬಟ್ಟಬಯಲ"**ನ್ನು ದೃಶ್ಯರೂಪವಾಗಿ ತೋರಿಸಿದಂತೆ ನಾವೂ ಸಹ ನಮ್ಮ ಶರೀರದಲ್ಲಿನ ದೇವರು ಹೇಳಿದ ರಹಸ್ಯವನ್ನು ಇರುವುದು ಇದ್ದಂತೆ ದೃಶ್ಯವಂತೆ ಚಿತ್ರಿಸಿಕೊಂಡು ನಂತರ ಪುಟದಲ್ಲಿ ನೋಡೋಣ.

ದೇವರು ತನ್ನ ಜ್ಞಾನದಲ್ಲಿ ಮೊದಲನೆಯದಾಗಿ ತನ್ನ ಸೃಷ್ಟಿಯನ್ನು ಕುರಿತು ಹೇಳಿದ್ದಾನೆ. ನಂತರ ತನ್ನ ಜ್ಞಾನವನ್ನು ಹೇಳಿದ್ದಾನೆ. ಮೊದಲು ಏಳು ಆಕಾಶಗಳನ್ನು ಹೇಗೆ ಸೃಷ್ಟಿಸಿದ್ದಾನೋ ನಿದರ್ಶನ ರೂಪವಾಗಿ ಇರುವ ಜ್ಞಾನವನ್ನು ದರ್ಶನವಾಗಿ ಮಾಡಿ ನೋಡಿಕೊಂಡಿದ್ದೇವೆ. ಸೃಷ್ಟಿನಂತರ ಮುಖ್ಯವಾದ ಜ್ಞಾನವಾಗಿ ಹೇಳಿರುವುದು ಮೂರು ಆತ್ಮಗಳ ವಿಷಯ. ಮೂರು ಆತ್ಮಗಳ ವಿಷಯವನ್ನು, ಮೂರು ದೈವ ಗ್ರಂಥಗಳಲ್ಲಿ ಹೇಳಲಾಗಿದೆ. ತೌರಾತ್ (ಭಗವದ್ಗೀತೆ) ಗ್ರಂಥದಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಹೇಳಿರುವ ಮೂರು ಆತ್ಮಗಳ ವಿಷಯವನ್ನು ಉಳಿದ ಎರಡು ಗ್ರಂಥಗಳಲ್ಲಿಯೂ ಸಹ ಹೇಳುವುದು ನಡೆದಿದೆ.




| | | | |
|---|---|---|---|
| **1)** | **ಕ್ಷರನು** | **ಅಕ್ಷರನು** | **ಪುರುಷೋತ್ತಮನು** |
| | **(ಜೀವಾತ್ಮ)** | **(ಆತ್ಮ)** | **(ಪರಮಾತ್ಮ)** |

**ಎಂಬ ಮೂವರು ಪುರುಷರಾದವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾರೆ.**

**(ಭಗವದ್ಗೀತೆಯಲ್ಲಿ, ಪುರುಷೋತ್ತಮಪ್ರಾಪ್ತಿಯೋಗ 16, 17 ಶ್ಲೋಕಗಳನ್ನು ನೋಡಿರಿ.)**

| | | | |
|---|---|---|---|
| **2)** | **ಕುಮಾರನು** | **ತಂದೆ** | **ಪರಿಶುದ್ಧಾತ್ಮ** |
| | **(ಜೀವಾತ್ಮ)** | **(ಆತ್ಮ)** | **(ಪರಮಾತ್ಮ)** |

**ಎಂಬ ಮೂವರು ತಿಳಿಯದವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾರೆ.**

**(ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯ 19, 20 ವಾಕ್ಯಗಳನ್ನು ನೋಡಿರಿ.)**

| | | |
|---|---|---|
| **3) ನಡೆಸಬೇಕಾದವನು** | **ನಡೆಸುವವನು** | **ಸಾಕ್ಷಿಯಾಗಿ ನೋಡುವವನು** |
| **(ಜೀವಾತ್ಮ)** | **(ಆತ್ಮ)** | **(ಪರಮಾತ್ಮ)** |

**ಎಂಬ ಮೂವರು ಕಾಣಿಸದವರು ಪ್ರತಿ ಮನುಷ್ಯನ ಶರೀರದಲ್ಲಿದ್ದಾರೆ.**

**(ಅಂತಿಮ ದೈವ ಗ್ರಂಥ ಖುರಾನ್‌ನಲ್ಲಿ ಸೂರಾ 50 ಆಯತ್ 21ನ್ನು ನೋಡಿರಿ.)**

ದೇವರು ಹೇಳಿದ ಜ್ಞಾನದಲ್ಲಿ ಮೊದಲನೆಯದು ಸೃಷ್ಠಿ ಆದಾಗ, ಎರಡನೆಯದು ಸೃಷ್ಠಿಯಲ್ಲಿರುವ ಮೂರು ಆತ್ಮಗಳ ಜ್ಞಾನ. ಮೂರು ಆತ್ಮಗಳನ್ನು ಕುರಿತು ಮೂರು ದೈವ ಗ್ರಂಥಗಳಲ್ಲಿ ಹೇಳಿದ್ದಾರೆ. ನಂತರ ಮುಖ್ಯವಾದ ಜ್ಞಾನ ಮನುಷ್ಯರು ಮಾಡಿಕೊಂಡ ಪಾಪಪುಣ್ಯಗಳೆಂಬ ಕರ್ಮವನ್ನು ಕುರಿತು ತಿಳಿದುಕೊಳ್ಳುವ ಜ್ಞಾನ. ಕರ್ಮವನ್ನು ಕುರಿತು ಮೂರು ದೈವ ಗ್ರಂಥಗಳಲ್ಲಿ ಎಷ್ಟೋ ವಿವರಣೆಯನ್ನು ಕೊಟ್ಟಿದ್ದಾನೆ. ಕರ್ಮ ಮನುಷ್ಯನ ಶರೀರದಲ್ಲಿಯೇ ಪರ್ಯವೇಕ್ಷಕನಿಂದ ಬರೆಯಲಾಗುತ್ತಿದೆಯೆಂದು ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಹೇಳಿದ್ದಾರೆ. ಕರ್ಮಲಿಖಿತವನ್ನು 'ಕರ್ಮಪತ್ರವೆಂದು' ಹೇಳುವುದೇ ಅಲ್ಲದೆ ಕರ್ಮ ಒಂದು ದಿವ್ಯ ಗ್ರಂಥವೆಂದು ನಮೋದು ಮಾಡಲಾಗುತ್ತಿವೆಯೆಂದು ಸಹ ಹೇಳಿದ್ದಾರೆ. ಕರ್ಮವನ್ನು ಅನುಭವಿಸದೆ ಯಾರೂ ತಪ್ಪಿಸಿಕೊಳ್ಳಲಾರರೆಂದು ಹೇಳುವುದೇ ಅಲ್ಲದೇ, ದೇವರು ಒಬ್ಬನೇ ಅದನ್ನು ಕ್ಷಮಿಸುವ ಕ್ಷಮಾಶೀಲನೆಂದು ಸಹ ಹೇಳಿದ್ದಾರೆ. ಕರ್ಮ ನಮ್ಮ ಶರೀರದಲ್ಲಿ ಹೇಗಿರುವುದೂ, ಎಲ್ಲಿರುವುದೂ ರಹಸ್ಯ ಜ್ಞಾನವಾಗಿ ಖುರಾನ್‌ನಲ್ಲಿಯೂ, ಭಗವದ್ಗೀತೆಯಲ್ಲಿಯೂ ಹೇಳಿದ್ದಾರೆ.

ದೇವರು ಮೊದಲು ಸೃಷ್ಠಿಯನ್ನು ಕುರಿತಿರುವ ಜ್ಞಾನವನ್ನು ಹೇಳಿದ್ದಾನೆ. ನಂತರ ಮೂರು ಆತ್ಮಗಳನ್ನು ಕುರಿತಿರುವ ಜ್ಞಾನವನ್ನು ಹೇಳಿದ್ದಾನೆ. ಆ ನಂತರ ಜೀವಿಯು ಕರ್ಮದಿಂದ ನಡೆಸಲಾಗುತ್ತಿದ್ದಾನೆಂದು, ಕರ್ಮಗಳನ್ನು ಕುರಿತು

ಜ್ಞಾನವನ್ನು ಹೇಳಿದ್ದಾನೆ. ಕೊನೆಯದಾಗಿ ಪ್ರತಿ ಕರ್ಮಕ್ಕೂ, ಪ್ರತಿ ಕೆಲಸಕ್ಕೂ ಒಂದು ಸಮಯವಿದೆಯೆಂದೂ, ಪ್ರತಿ ಅವಧಿ ಕಾಲದಲ್ಲಿ ನಿರ್ಣಯಿಸಲಾಗಿದೆ ಯೆಂದು ದೇವರು ತನ್ನ ಜ್ಞಾನದಲ್ಲಿ ಹೇಳಿದ್ದಾನೆ. ಈ ರೀತಿ ದೇವರ ಜ್ಞಾನವನ್ನು ನಾಲ್ಕು ಮುಖ್ಯವಾದ ಭಾಗಗಳಾಗಿ ಹೇಳಿದ್ದಾನೆ. ಮೂರು ದೈವಗ್ರಂಥಗಳಲ್ಲಿ ಈ ನಾಲ್ಕು ಜ್ಞಾನಗಳೇ ಮುಖ್ಯವಾಗಿ ಹೇಳಲಾಗಿವೆ. ಈ ನಾಲ್ಕು ಭಾಗಗಳ ಜ್ಞಾನವನ್ನು ದರ್ಶನವಾಗಿ ಮಾಡಿಕೊಳ್ಳುವುದಾದರೇ ಅದೇ ದೇವರ ಚಿಹ್ನವಾಗುತ್ತದೆ. ದೇವರ ಜ್ಞಾನ ಅದೃಶ್ಯರೂಪದಲ್ಲಿ ಪರಮಾರ್ಥವಾಗಿ ಇದೆ. ಅಂತಹ ಪರಮಾರ್ಥವನ್ನು ಅರ್ಥ ಮಾಡಿಕೊಳ್ಳುವುದಾದರೇ, ನಿದರ್ಶನ ಜ್ಞಾನವನ್ನು ದರ್ಶನರೂಪವಾಗಿ ಮಾಡಿಕೊಳ್ಳುವುದಾದರೇ, ದರ್ಶನಕೊಡುವುದೇ ದೇವರ ಚಿಹ್ನೆಯಾಗುತ್ತದೆ. ದೇವರ ಚಿಹ್ನೆ ಅತ್ಯಂತ ಶಕ್ತಿವಂತವಾದದ್ದು, ಅಂತಹ ದೇವರ ಜ್ಞಾನವನ್ನು ಹೇಗೆ ದೃಶ್ಯರೂಪವಾದ ಚಿಹ್ನೆಯಾಗಿ (ಗುರುತಾಗಿ) ಮಾಡಿಕೊಳ್ಳಬೇಕೋ ಈಗ ವಿವರಿಸಿಕೊಳ್ಳೋಣ. ದೇವರು ಮೊದಲು ಭೂಮಿಯನ್ನೂ, ಏಳು ಆಕಾಶಗಳನ್ನು ಸೃಷ್ಟಿಸಿದ್ದಾನೆ. ಅದನ್ನು ದೃಶ್ಯರೂಪವಾಗಿ ಮಾಡಿಕೊಂಡಾಗ ಶರೀರ ಭೂಮಿಯಾಗಿ, ಏಳು ಆಕಾಶಗಳು ಶರೀರದಲ್ಲಿರುವ ಶರೀರವನ್ನು ನಡೆಸುವ ಏಳು ನಾಡೀ ಕೇಂದ್ರಗಳಾಗಿ ಹೇಳಿಕೊಂಡಿದ್ದೇವೆ. ಏಳನೇ ನಾಡೀಕೇಂದ್ರದ ಮೇಲೆ ದೇವರ ಸಿಂಹಾಸನವಿದ್ದಹಾಗೇ, ದೇವರು ಅಲ್ಲಿ ಇರುವಂತೆ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಅದನ್ನು ದೃಶ್ಯರೂಪದಲ್ಲಿ ನೋಡಿಕೊಳ್ಳಿರೆಂದು ಹೇಳಿದ್ದಾರೆ. ಹಾಗೆ ಜ್ಞಾನದೃಷ್ಟಿಯಿಂದ ನೋಡಿದರೆ ದೇವರ ಸೃಷ್ಟಿಯಲ್ಲಿ ಏನಾದರೂ ಲೋಪವಿದೆಯೋ ಇಲ್ಲವೋ ನಿನಗೇ ತಿಳಿಯುತ್ತದೆ ಅಲ್ಲವೆ! ಅಂದಿದ್ದಾನೆ. ಆ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 67, ಆಯತ್ 3ರಲ್ಲಿ **(67–3) "ಆತನು ಏಳು ಆಕಾಶಗಳನ್ನು ಒಂದರಮೇಲೊಂದು ನಿರ್ಮಿಸಿದ್ದಾನೆ. ನೀನು ಎಲ್ಲಿ ನೋಡಿದರೂ ಕರುಣಾಮಯನ ಸೃಷ್ಟಿ ಪ್ರಕ್ರಿಯೆಯಲ್ಲಿ ಎಂತಹ ಲೋಪವನ್ನು ತಿಳಿಯಲಾರೆ. ಬೇಕೆಂದರೆ ಮತ್ತೊಂದು ಬಾರಿ ದೃಷ್ಟಿಯನ್ನಿಟ್ಟು ತೀಕ್ಷಣವಾಗಿ ನೋಡು, ನಿನಗೇನಾದರೂ ಲೋಪ ಕಾಣಿಸುತ್ತಿದೆಯೇನೋ!**

ಈ ಆಯತ್‌ನಲ್ಲಿ ನೀನು ಎಲ್ಲಿ ನೋಡಿದರೂ ಒಂದು ದೃಶ್ಯವನ್ನು ನೋಡಿದಂತೆ ಹೇಳಿದ್ದೀರಲ್ಲವೆ! ದೇವರ ಸೃಷ್ಠಿಯನ್ನು ಬೇಕೆಂದರೇ ಮತ್ತೊಂದು ಬಾರಿ ದೃಷ್ಠಿಯನ್ನಿಟ್ಟು ತೀಕ್ಷಣವಾಗಿ ನೋಡು ನಿನಗೇನಾದರೂ ಲೋಪ ಕಾಣಿಸುತ್ತದೇನೋ ಎಂದು ಹೇಳುವುದು ಸಹ ನಡೆದಿದೆ. ಇದನ್ನನುಸರಿಸಿ ದೇವರ ಸೃಷ್ಠಿಯನ್ನು ದೃಶ್ಯರೂಪದಲ್ಲಿ ನೋಡೆಂದು, ಯಾವುದಾದರೂ ಲೋಪ ಕಾಣಿಸುತ್ತದೇನೋ ಎಂದು ಹೇಳಿದ್ದೀರಲ್ಲವೆ! ಇಲ್ಲಿ ಸೃಷ್ಠಿಯನ್ನು ದೃಶ್ಯರೂಪವಾಗಿ ನೋಡೆಂದೇ ಅಲ್ಲವೆ ಹೇಳಿರುವುದು. ಇಲ್ಲಿ ದೇವರು ಹೇಳಿದಂತೆ ಸೃಷ್ಠಿಯನ್ನು ದೃಷ್ಠಿರೂಪದೊಳಗೆ ಬದಲಾಯಿಸಿಕೊಂಡು ದೃಶ್ಯವಾಗಿ ನೋಡುವುದಾದರೇ ಏಳು ಆಕಾಶಗಳು ಹೀಗೆ ಇವೆಯೆಂದು ಮೊದಲೇ ಒಂದು ವಿಧವಾಗಿ ಚಿತ್ರೀಕರಿಸಿ ನೋಡಿಕೊಂಡಿದ್ದೇವೆ. ಈಗ ಏಳು ಆಕಾಶಗಳ ಮೇಲೆ ದೇವರ ಇರುವಿಕೆ ಹೇಗಿದೆಯೋ ಚಿತ್ರಿಸಿಕೊಂಡು ನಂತರ ಪುಟದಲ್ಲಿ ನೋಡೋಣ.

ಏಳು ಆಕಾಶಗಳ ಮೇಲೆ ದೇವರ ನಿಲಯವನ್ನು ದೃಶ್ಯರೂಪವಾಗಿ ಮಾಡಿಕೊಂಡಿದ್ದೇವೆ. ದೇವರು ನಿವಾಸಿಸುವ ನಿವಾಸವನ್ನು ಬ್ರಹ್ಮಚಕ್ರ ಎನ್ನುತ್ತೇವೆ. ಬ್ರಹ್ಮಚಕ್ರ ಎಂದರೆ ದೇವರ ಚಕ್ರವೆಂದು ಅರ್ಥ. ದೇವರ ಚಕ್ರ ಎರಡು ಭಾಗಗಳಾಗಿ ಇದೆ. ಒಂದು ಭಾಗ ದೇವರ ಹಗಲು, ಮತ್ತೊಂದು ಭಾಗ ದೇವರ ರಾತ್ರಿ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 17ನೇ ಶ್ಲೋಕದಲ್ಲಿ ಸಾವಿರ ಯುಗಗಳು ದೇವರಿಗೆ ಒಂದು ಹಗಲು, ಹಾಗೇ ಸಾವಿರ ಯುಗಗಳು ದೇವರಿಗೆ ಒಂದು ರಾತ್ರಿ ಎಂದು ಹೇಳಿದ್ದೀರ. ದೇವರ ಚಕ್ರ ಒಂದು ಸುತ್ತು ತಿರುಗುವುದಕ್ಕೆ ಎರಡು ಸಾವಿರ ಯುಗಗಳ ಕಾಲ ಹಿಡಿಯುತ್ತದೆಂದು ತಿಳಿಯುತ್ತಿದೆ. ಎಂದರೆ ದೇವರಿಗೆ ಒಂದು ದಿನ ಅಂದರೇ ಎರಡು ಸಾವಿರ ಯುಗಗಳ ಕಾಲವೆಂದು ಅರ್ಥ. ದೇವರ ವೊಂದರ

ದೇವರ ಚಿಹ್ನ




**ಬ್ರಹ್ಮನಾಡಿ (ಬೆನ್ನಲುಬಿನಲ್ಲಿ) ಏಳು ನಾಡೀಕೇಂದ್ರಗಳು ಏಳು ಆಕಾಶಗಳಾಗಿ, ಆರು ಕೆಲಸ ದಿನಗಳು ಒಂದು ವಿಶ್ರಾಂತಿ ದಿನವಾಗಿ ಇರುವುದನ್ನು ನೋಡಬಹುದು.**

ಹಗಲು ರಾತ್ರಿಯನ್ನು ಗ್ರಹಿಸುವುದಾದರೇ ಎಷ್ಟೋ ಉನ್ನತವಾದ ಜ್ಞಾನವನ್ನು ಮನುಷ್ಯ ತಿಳಿಯಬಲ್ಲನು. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 24, ಆಯತ್ 44ರಲ್ಲಿ ಈ ರೀತಿ ಇದೆ ನೋಡಿರಿ. **(24–44) "ಅಲ್ಲಾಹ್ ಹಗಲಿರುಳನ್ನು ಬದಲಾಯಿಸುತ್ತಿರುತ್ತಾನೆ. ಕಣ್ಣಿರುವವನಿಗೆ ಇದರಲ್ಲಿ ದೊಡ್ಡ ಗುಣಪಾಠ ಇದೆ."**

ಇಲ್ಲಿ ಚೆನ್ನಾಗಿ ಜಾಗ್ರತೆಯಿಂದ ವಿವರಿಸಿಕೊಂಡು ನೋಡಿದರೇ **ಕಣ್ಣಿರುವವನಿಗೆ** ಇದರಲ್ಲಿ ಗುಣಪಾಠ ಇದೆಯೆಂದು ಹೇಳಿದ್ದೀರಲ್ಲವೆ! ಇದನ್ನನುಸರಿಸಿ ದೇವರ ಹಗಲು ರಾತ್ರಿಯನ್ನು ಚಿತ್ರಪಟವಾಗಿ ನೋಡುವವನಿಗೆ ಅದರಲ್ಲಿನ ರಹಸ್ಯ ಜ್ಞಾನ ತಿಳಿಯಬಲ್ಲದೆಂದು ಅರ್ಥವಾಗುತ್ತಿದೆ. ಆದ್ದರಿಂದ ನಾವು ದೇವರ ನಿವಾಸವನ್ನು ರಾತ್ರಿ ಹಗಲು ಎಂದು ವಿಭಜಿಸಿ ಏಳು ಆಕಾಶಗಳ

ಮೇಲೆ ಇರುವ ಬ್ರಹ್ಮ ಚಕ್ರವನ್ನು ತೋರಿಸಿದ್ದೇವೆ. ಕೆಲವರಿಗೆ ನಾವು ಹೇಳುವುದು ಸ್ವಲ್ಪವೂ ಅರ್ಥವಾಗದಿರುವುದರಿಂದ ನಮ್ಮನ್ನು ಅಜ್ಞಾನಿಗಳಾಗಿ ಹೋಲಿಸಿ ದೂಷಿಸುತ್ತಾ, ಅಜ್ಞಾನವನ್ನು ಬೋಧಿಸುತ್ತಿದ್ದಾನೆಂದು ಅನ್ನಬಹುದು. ಅವರಿಗೆ ನಾವು ಹೇಳುವುದೇನೆಂದರೇ! ನಾವು ಎಲ್ಲಿಯೂ ಸ್ವತಃವಾಗಿ ಬೋಧಿಸದೆ ದೈವಗ್ರಂಥವನ್ನು ಆಧಾರ ಮಾಡಿಕೊಂಡೇ ಹೇಳುತ್ತಿದ್ದೇವೆ. ಕೆಲವರು ತಾವು ಅಜ್ಞಾನದಲ್ಲಿ ಇದ್ದು ಅಲ್ಲಾಹ್ ನಿದರ್ಶನಗಳು ದರ್ಶನ ರೂಪವಾದಾಗ, ನಿದರ್ಶನಗಳ ವಿಷಯದಲ್ಲಿ ಮಂಡದಾಗಿ ಮಾತನಾಡುತ್ತಿದ್ದಾರೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 40, ಆಯತ್ 35ರಲ್ಲಿ ಮಂಡುವಾದಿಗಳನ್ನು ಕುರಿತು ಹೀಗೆ ಹೇಳಿದ್ದಾರೆ ನೋಡಿರಿ. **(40–35) "ಅವರು ತಮ್ಮ ಹತ್ತಿರಕ್ಕೆ ಬಂದಿರುವ ಯವ ಪ್ರಮಾಣವೂ ಇಲ್ಲದಂತೆಯೇ ಅಲ್ಲಾಹ್ ನಿದರ್ಶನಗಳ ವಿಷಯದಲ್ಲಿ ಮಂಡದಾಗಿ ವಾದಿಸುತ್ತಾರೆ. ಇಂತಹ ಪದ್ಧತಿ ಅಲ್ಲಾಹ್ ಹತ್ತಿರ ಮತ್ತು ವಿಶ್ವಾಸಿಗಳ ಹತ್ತಿರವೂ ಸಹ ಎಷ್ಟೋ ಅಯಿಷ್ಟಕರವಾಗಿದೆ. ಈ ರೀತಿ ಗರ್ವಿಷ್ಠಿ, ಕ್ರೂರನಾದ ಪ್ರತಿ ವ್ಯಕ್ತಿ ಹೃದಯದಮೇಲೆ ಅಲ್ಲಾ ಮುದ್ರೆ ಹಾಕಿ ಬಿಡುತ್ತಾನೆ."**

ನಾವು ಜ್ಞಾನದೃಷ್ಠಿ ಇಲ್ಲದವರಿಗೂ ಸಹ ಅರ್ಥವಾಗುವಂತೆ, ಸೂಕ್ಷ್ಮವಾದ ದೇವರ ಜ್ಞಾನವನ್ನು ಸ್ಥೂಲವಾದ ಗುರುತಾಗಿ, ಎಲ್ಲರಿಗೂ ತಿಳಿಯುವಂತೆ ದೃಶ್ಯ ರೂಪವಾಗಿ ತೋರಿಸುತ್ತಿದ್ದೇವೆ. ನಾವು ಪ್ರತಿಯೊಂದೂ ದೈವಗ್ರಂಥಗಳ ಆಧಾರದಿಂದಲೇ ತೋರಿಸುತ್ತಿದ್ದೇನೆ. ಇಲ್ಲಿ ಕೆಲವರಿಗೆ ಒಂದು ಅನುಮಾನವೂ ಬಂದು ಹೀಗೆ ಪ್ರಶ್ನಿಸಬಹುದು. ಸೂಕ್ಷ್ಮವಾದ ದೇವರ ಜ್ಞಾನ ಬೋಧೆಗಳ ರೂಪದಲ್ಲಿ ಇರುವಾಗ, ದೃಶ್ಯ ರೂಪದಲ್ಲಿ ನೋಡುವುದಕ್ಕೆ ಸಾಧ್ಯವಾಗುತ್ತದಾ? ಎಂದು ಕೇಳಬಹುದು. ಅದಕ್ಕೆ ಉತ್ತರವಾಗಿ ನಾವು ಹೀಗೆ ಹೇಳುತ್ತಿದ್ದೇವೆ. ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 10, 11 ಶ್ಲೋಕಗಳಲ್ಲಿ ಈ ರೀತಿ ಇದೆ ನೋಡಿರಿ.

**10ನೇ. ಶ್ಲೋ॥ ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥**

**11ನೇ. ಶ್ಲೋ॥ ಯತನ್ತೋ ಯೋಗಿನ ಶ್ಚೈನಂ ಪಶ್ಯನ್ತ್ಯಾತ್ಮ ನ್ಯವಸ್ಥಿತಮ್ ।**
**ಯತನ್ತೋ ಪ್ರಕೃತಾತ್ಮಾನೋ ನೈನಂ ಪಶ್ಯನ್ತ್ಯ ಚೇತಸಃ ॥**

**ಭಾವಾರ್ಥ :–** "ಜೀವಾತ್ಮ ಗುಣಗಳಿರುವವನಾಗಿ ಶರೀರದಲ್ಲಿ ನಿವಾಸವಿರುತ್ತಾನೆ. ಗುಣಗಳ ಮಧ್ಯದಲ್ಲಿ ಇದ್ದೂ ವಿಷಯ ಸುಖಗಳನ್ನು ಅನುಭವಿಸುತ್ತಿರುವನು. ಈ ವಿಧಾನವನ್ನು ಮೂಢರು ತಿಳಿಯಲಾರರು. ಜ್ಞಾನ ನೇತ್ರರು ಮಾತ್ರ ನೋಡಬಲ್ಲರು."

"ಶರೀರದಲ್ಲಿರುವ ಆತ್ಮನನ್ನು, ಜೀವಾತ್ಮನನ್ನು ಯೋಗಿಗಳು ಪ್ರಯತ್ನ ಮಾಡಿ ತಿಳಿಯಬಲ್ಲರು (ನೋಡಬಲ್ಲರು). ಮೂಢರಾದವರು ಎಷ್ಟು ಪ್ರಯತ್ನಿಸಿದರೂ ಶರೀರದಲ್ಲಿನ ತತಂಗವನ್ನು ದೈವಯಂತ್ರಾಗವನ್ನು ನೋಡಲಾರರು."

ಖುರಾನ್ ಗ್ರಂಥದಲ್ಲಿ ನಿದರ್ಶನವಾಗಿರುವುದನ್ನು ನೋಡಬಲ್ಲರೆನ್ನುವಂತೆ ಭಗವದ್ಗೀತೆ ಗ್ರಂಥದಲ್ಲಿ 5000 ಸಂವತ್ಸರಗಳ ಪೂರ್ವವೇ, ಶರೀರದಲ್ಲಿನ ಜೀವಿಯು ಗುಣಗಳ ಮಧ್ಯದಲ್ಲಿ ಹೇಗಿರುವುದೂ ಯೋಗಿಗಳು ತಿಳಿಯಬಲ್ಲರೆಂದು, ಅಜ್ಞಾನಿಗಳು ತಿಳಿಯಲಾರರೆಂದು ಹೇಳಿದ್ದಾರೆ.

ದೈವಗ್ರಂಥಗಳಲ್ಲಿ ಪ್ರಮಾಣಗಳಾಗಿ ಹೇಳಿದಂತೆ ನಿದರ್ಶನವನ್ನು ದರ್ಶನವಾಗಿ ಮಾಡಿಕೊಂಡರೆ, ಏಳು ಆಕಾಶಗಳು ನಮ್ಮ ಶರೀರದಲ್ಲಿ ಹೇಗಿರುವುದೂ ತಿಳಿದುಹೋಗಿದೆ. ನಂತರ ಏಳು ಆಕಾಶಗಳ ಮೇಲೆ ದೇವರ ಸ್ಥಾನ ಹೇಗಿರುವುದು ಗುರುತಿಸಿದ್ದೇವೆ. ಅದೇ ವಿಧಾನದಿಂದ ದೇವರು ಹೇಳಿದ ಜ್ಞಾನದ ಪ್ರಕಾರ ಮೂರು ಆತ್ಮಗಳ ವಿಧಾನ, ಕರ್ಮವಿಧಾನ, ಕರ್ಮವೊಂದರ ತೀರ್ಮಾನ ವಿಧಾನವನ್ನು ದೃಶ್ಯರೂಪದಲ್ಲಿ ನೋಡುವುದಕ್ಕೆ ಪ್ರಯತ್ನಿಸೋಣ. ಮೊದಲು ಜೀವಾತ್ಮ ನಿವಾಸವನ್ನು ಕುರಿತು ಭಗವದ್ಗೀತೆ ಶ್ಲೋಕದ ಪ್ರಕಾರ

ಮತ್ತು ಖುರಾನ್ ವಾಕ್ಯದ ಪ್ರಕಾರ ನೋಡುವುದಕ್ಕೆ ಪ್ರಯತ್ನಿಸೋಣ. ಏಳು ಆಕಾಶಗಳ ಮೇಲೆ ಪರಮಾತ್ಮ ಇರುವಂತೆ ಅಲ್ಲೇ ಏಳು ಆಕಾಶಗಳ ಮೆಲೆಯೇ ಜೀವಾತ್ಮ ಸಹ ಇದ್ದಾನೆ. ಜೀವಾತ್ಮ ಪರಮಾತ್ಮ ಸ್ಥಾನಕ್ಕಿಂತ ಸ್ವಲ್ಪ ಕೆಳಗೆ ನಿವಾಸವಿರುತ್ತಾನೆ. ಅದನ್ನೇ ದೃಶ್ಯವಾಗಿ ಚಿತ್ರಿಸಿಕೊಂಡು ಕೆಳಗಿನ ಚಿತ್ರದಲ್ಲಿ ನೋಡೋಣ.




ಈ ಚಿತ್ರದಲ್ಲಿ ಏಳನೆಯ ಆಕಾಶದ ಮೇಲಿರುವ ಬ್ರಹ್ಮಚಕ್ರದಲ್ಲಿ ಎರಡು ಭಾಗಗಳಲ್ಲಿ ದೇವರು ಇದ್ದಾನೆ. ಏಳು ಆಕಾಶಗಳಲ್ಲಿ ಕ್ರಮವಾಗಿ ಆಕಾಶದ ಮಧ್ಯದಲ್ಲಿ ಎಂದರೆ ಬ್ರಹ್ಮನಾಡಿ ಮಧ್ಯದಲ್ಲಿ ಏಳನೆಯ ಆಕಾಶದಿಂದ ಒಂದನೆಯ

ಆಕಾಶದವರೆಗು ಆತ್ಮ ಇದೆ. ಏಳನೆಯ ಸ್ಥಾನದಲ್ಲಿ ಎಂದರೆ! ಏಳನೆಯ ಆಕಾಶದಲ್ಲಿಯೇ ಬ್ರಹ್ಮಚಕ್ರ ಕೆಳಗೆ ಮೂರನೆಯ ಚಕ್ರವಾಗಿರುವ ಗುಣ ಚಕ್ರದಲ್ಲಿ ಜೀವಿಯು ನಿವಾಸವಿದ್ದಾನೆ. ಏಳನೆಯ ಸ್ಥಾನದಲ್ಲಿ ಇರುವ ನಾಲ್ಕು ಚಕ್ರಗಳಲ್ಲಿ ಮೇಲಿರುವುದು ಬ್ರಹ್ಮಚಕ್ರವಾದಾಗ ಕೆಳಗಿರುವುದು ಗುಣಚಕ್ರವಾಗಿ ಇದೆ. ಗುಣಚಕ್ರ ಮೂರು ಭಾಗಗಳಾಗಿ ಇದೆ. ಮೂರು ಭಾಗಗಳಲ್ಲಿ ಯಾವುದೋ ಒಂದು ಕಡೆ ಜೀವಾತ್ಮ ಇರುವುದು ನಡೆಯುತ್ತಿದೆ. ಈ ರೀತಿ ಏಳನೇ ಆಕಾಶದಲ್ಲಿಯೇ ಅಲ್ಲಾಹ್ (ದೇವರಿ)ಗಿಂತ ಕೆಳಗೆ ಗುಣಚಕ್ರದಲ್ಲಿ ಜೀವಾತ್ಮ ಇರುವಾಗ, ಏಳು ಆಕಾಶಗಳಲ್ಲಿ ಬ್ರಹ್ಮನಾಡಿಯಲ್ಲಿ ಆತ್ಮ ಇದೆ.  ಈ ರೀತಿ ಮೂರು ಆತ್ಮಗಳ ನಿವಾಸ ತಿಳಿದುಹೋಗಿ ದರ್ಶನರೂಪದೊಳಗೆ ಬಂದಿದೆ.

ಇಲ್ಲಿಗೆ ಏಳು ಆಕಾಶಗಳು, ಮೂರು ಆತ್ಮಗಳ ಜ್ಞಾನವೊಂದರ ನಿದರ್ಶನ, ಪರಮಾರ್ಥ ತಿಳಿದುಹೋಗಿದೆ. ಇನ್ನು ತಿಳಿಯಬೇಕಾಗಿರುವುದು ಕರ್ಮ, ಅವಧಿಯೊಂದಿಗೆ ಕೂಡಿಕೊಂಡ ಕಾಲ. ಈಗ ಕರ್ಮವನ್ನು ಕುರಿತು ನೋಡಿದರೇ ಹೀಗೆ ತಿಳಿಯಬಲ್ಲದು.

ಕರ್ಮಚಕ್ರ 12 ಭಾಗಗಳಾಗಿ ಇದೆ. ಅದರಲ್ಲಿ 1,5,9 ಸ್ಥಾನಗಳಲ್ಲಿ ಪುಣ್ಯದ ನೆಲೆ ಇರುತ್ತದೆ. ಹಾಗೇ 3,7,11 ಸ್ಥಾನಗಳಲ್ಲಿ ಪಾಪದ ನೆಲೆ ಇರುತ್ತದೆ. ಉಳಿದ 2,4,6,8,10,12 ಸ್ಥಾನಗಳಲ್ಲಿ ಪಾಪಪುಣ್ಯಗಳು ಎರಡು ಇವೆ. ಮನುಷ್ಯ ಮಾಡಿಕೊಂಡ ಪಾಪಗಳು ಪುಣ್ಯಗಳು ಕರ್ಮಚಕ್ರದಲ್ಲಿ ಆಯಾ ಸ್ಥಾನಗಳಲ್ಲಿ ಆತ್ಮನಿಂದ ದಾಖಲೆ ಮಾಡಲಾಗುತ್ತಿರುತ್ತದೆ. ಹಾಗೇ ಆತ್ಮಯಿಂದಲೇ ಅನುಭವಿಸುವಂತೆ ಮಾಡಲಾಗುತ್ತಿರುತ್ತದೆ. ಆದರೇ ಕರ್ಮಚಕ್ರಕ್ಕಿಂತ ಕೆಳಗಿರುವ ಗುಣಚಕ್ರದಿಂದ ಕರ್ಮಚಕ್ರಕ್ಕೆ ಸಂಬಂಧವಿರುತ್ತದೆ. ಕರ್ಮಚಕ್ರದಲ್ಲಿನ ಕರ್ಮ (ಪಾಪಪುಣ್ಯಗಳು) ಕೆಳಗೆ ಚಕ್ರಮಯವಾಗಿ ಗುಣಚಕ್ರದ ಮೇಲೆ ಪ್ರಸರಿಸುವುದರಿಂದ ಅಲ್ಲಿರುವ ಜೀವಿಯು ಅದನ್ನು ಅನುಭವಿಸುತ್ತಾನೆ.




## ಕರ್ಮಚಕ್ರ

ಇದೇ ವಿಷಯವನ್ನು ಖುರಾನ್ ಗ್ರಂಥದಲ್ಲಿ ಯಾರ ಕರ್ಮ ಅವನೇ ಅನುಭವಿಸಬೇಕೆಂದು ಸೂರಾ 2, ಆಯತ್ 134 ರಲ್ಲಿ ಹೇಳಿದ್ದಾರೆ. **(2–134) "ಅದು ಗತಿಸಿದ ಒಂದು ಸಮೂಹ. ಅವರು ಮಾಡಿಕೊಂಡಿರುವುದು ಅವರಿಗೇ ಸೇರುತ್ತದೆ. ನೀವು ಮಾಡಿರುವುದು ನಿಮಗೇ ಸೇರುತ್ತದೆ. ಇತರರ ಕರ್ಮಗಳ ಕುರಿತು ನಿಮ್ಮನ್ನು ಪ್ರಶ್ನಿಸುವುದಿಲ್ಲ"** ಎಂದು ಇದೆ. ಇದನ್ನನುಸರಿಸಿ ಮೇಲಿನ ಕರ್ಮಚಕ್ರದಲ್ಲಿ ಏನು ದಾಖಲಾಗಿದ್ದರೇ ಕೆಳಗಿನ ಚಕ್ರದಲ್ಲಿ ಇರುವ ಜೀವಿಗೂ ಅದೇ ಅನುಭವಕ್ಕೆ ಬರುತ್ತದೆ. ಇತರರ ಕರ್ಮದೊಂದಿಗೆ ಜೀವನಿಗೆ ಸಂಬಂಧವೇ ಇರುವುದಿಲ್ಲ. ಅದರ ಪ್ರಕ್ರಿಯೆಯಲ್ಲಿ ಗುಣಚಕ್ರದಲ್ಲಿನ ಗುಣಗಳು

ಜೀವಿಯ ಮೇಲೆ ಪ್ರಯೋಗಿಸಲಾಗುತ್ತದೆ. ಗುಣಚಕ್ರವನ್ನು ಚೆನ್ನಾಗಿ ಪರಿಶೀಲಿಸಿದರೆ ಈ ವಿಧವಾಗಿ ಇದೆ. ಪುಟದಲ್ಲಿ ಚಿತ್ರವನ್ನು ನೋಡಿರಿ.




**ಗುಣಚಕ್ರ**

ಗುಣಚಕ್ರ ಮೂರು ಭಾಗಗಳಾಗಿ ಇದೆ. ಒಂದೊಂದು ಭಾಗದಲ್ಲಿ ಬೇರೆಬೇರೆ ಹೆಸರುಗಳಿರುವ ಹನ್ನೆರಡು ಗುಣಗಳು ಇವೆ. ಒಂದೊಂದು ಭಾಗದಲ್ಲಿರುವ ಗುಣಗಳಿಗೆ ಒಂದೊಂದು ಹೆಸರಿದೆ. ಮೇಲಿನ ಭಾಗದಲ್ಲಿ ಇರುವ ಗುಣಗಳನ್ನು ತಾಮಸ ಭಾಗ ಗುಣಗಳೆಂದು ಹೇಳುತ್ತಿರುವರು. ಹಾಗೆಯೇ ಮಧ್ಯದಲ್ಲಿರುವುದನ್ನು ರಾಜಸ ಗುಣ ಭಾಗ ಎಂದು ಅನ್ನುತ್ತೇವೆ. ಹಾಗೇ ಮೂರನೆಯದನ್ನು ಸಾತ್ತ್ವಿಕ ಗುಣಭಾಗ ಎನ್ನುತ್ತೇವೆ. ಮಧ್ಯದಲ್ಲಿ ಗುಂಡ್ರವಾಗಿರುವ ಭಾಗ ಬ್ರಹ್ಮನಾಡಿಯಾಗಿ ಇದೆ. ಅದನ್ನು ಗುಣ ರಹಿತ ಭಾಗ (ಗುಣವಿಲ್ಲದ ಭಾಗ) ಎಂದು ಅನ್ನುತ್ತೇವೆ. ಈ ಮೂರು ಗುಣ ಭಾಗಗಳಲ್ಲಿಯೂ ಗುಣಗಳು ಇವೆ. ಒಂದೊಂದು ಭಾಗದಲ್ಲಿ 12 ಗುಣಗಳು ಇವೆ. ಅದರಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇವೆ. ಕೆಟ್ಟ ಗುಣಗಳು ಸಾಲಾಗಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ ಎಂದು ಅನ್ನುತ್ತೇವೆ. ಒಳ್ಳೆಯ

ಗುಣಗಳನ್ನು ಸಾಲಾಗಿ ದಾನ, ದಯ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎಂದು ಎನ್ನುತ್ತಾರೆ. ಕೆಟ್ಟ ಗುಣಗಳಲ್ಲಿ ಜೀವಿಯು ಸೇರಿದರೆ ಪಾಪ ಬರುತ್ತದೆ. ಒಳ್ಳೆಯ ಗುಣಗಳಲ್ಲಿ ಜೀವಿಯು ಸೇರಿದರೆ ಪುಣ್ಯ ಬರುತ್ತದೆ. ಜೀವಿಯು ತಾಮಸ, ರಾಜಸ, ಸಾತ್ತ್ವಿಕ ಎಂಬ ಮೂರು ಗುಣ ಭಾಗಗಳಲ್ಲಿ ತಿರುಗುತ್ತಿರುವನು. ಯಾವ ಒಂದು ಗುಣಭಾಗದಲ್ಲಿಯೂ ಸಹ ಶಾಶ್ವತವಾಗಿ ಇರುವುದಿಲ್ಲ. ಆದರೇ ಹೆಚ್ಚಿನ ಕಾಲ ಯಾವ ಭಾಗದಲ್ಲಿ ಕಳೆದರೆ ಆ ಭಾಗವೊಂದರ ಹೆಸರು ಅವನಿಗೆ ಬರುತ್ತಿರುತ್ತದೆ. ತಾಮಸದಲ್ಲಿ ಹೆಚ್ಚಿನ ಕಾಲವಿರುವವನನ್ನು ತಾಮಸನೆಂದೂ, ರಾಜಸದಲ್ಲಿ ಹೆಚ್ಚಿನ ಕಾಲವಿರುವವನನ್ನು ರಾಜಸನೆಂದೂ, ಸಾತ್ತ್ವಿಕದಲ್ಲಿ ಹೆಚ್ಚಿನ ಕಾಲವಿರುವವನನ್ನು ಸಾತ್ತ್ವಿಕನೆಂದೂ ಕರೆಯುತ್ತೇವೆ.

ಕೆಳಗೆ ಗುಣಚಕ್ರವಿರುವಾಗ ಅದರ ಮೇಲೆ ಕರ್ಮಚಕ್ರವಿರುತ್ತದೆ. ಗುಣ ಚಕ್ರದಲ್ಲಿನ ಜೀವಿಯು ಮಾಡಿಕೊಂಡಿರುವ ಹಳೆ ಪಾಪಪುಣ್ಯಗಳನ್ನು ಕರ್ಮಚಕ್ರದಿಂದ ಆತ್ಮ ಅನುಭವಿಸುವಂತೆ ಮಾಡುತ್ತದೆ. ಹಾಗೇ ಪ್ರಸ್ತುತ ಕಾಲದಲ್ಲಿ ಮಾಡಿಕೊಂಡಿರುವ ಪಾಪಪುಣ್ಯಗಳನ್ನು ಆತ್ಮವೇ ಕರ್ಮಚಕ್ರದಲ್ಲಿ ನಮೋದು ಮಾಡುತ್ತಿದೆ. ಗುಣಚಕ್ರಕ್ಕೆ ಮೇಲಿರುವ ಕರ್ಮಚಕ್ರದಿಂದ ಕರ್ಮ ಇಳಿದು ಅನುಭವಕ್ಕೆ ಬರುತ್ತಿದೆ. ಹಾಗೇ ಜೀವಿಯು ಹೊಸದಾಗಿ ಮಾಡಿಕೊಂಡ ಕರ್ಮ ಕರ್ಮಚಕ್ರದೊಳಗೆ ಏರುತ್ತಿದೆ. ದೇವರು ಏಳನೇ ಸ್ಥಾನ (ಏಳನೇ ಆಕಾಶ)ದಲ್ಲಿ ಇದ್ದು ಕೆಳಕ್ಕೆ ಇಳಿಯುವ ಕರ್ಮವನ್ನು, ಮೇಲಕ್ಕೆ ಏರುವ ಕರ್ಮವನ್ನು ನೋಡುತ್ತಿದ್ದಾನೆ. ದೇವರು ಸಾಕ್ಷಿಯಾಗಿ ಮಾತ್ರ ಇದ್ದಾನೆ. ಎರಡನೆಯ ಆತ್ಮ ಮಾತ್ರ ಶರೀರದಲ್ಲಿನ ಕಾರ್ಯಗಳನ್ನು ಮಾಡುತ್ತಿದೆ. ಎರಡನೆಯ ಆತ್ಮವು ಮಾತ್ರ ಶರೀರದಲ್ಲಿನ ಕಾರ್ಯಗಳನ್ನೆಲ್ಲ ಮಾಡುತ್ತಿದೆ. ಪ್ರತಿ ವಿಷಯದಲ್ಲೂ ಜೀವಿಯನ್ನು ಕರ್ಮಬದ್ಧನನ್ನಾಗಿ ಮಾಡಿ ಕರ್ಮವನ್ನು ಅನುಸರಿಸಿ ನಡೆಸುತ್ತಿದೆ. ದೇವರು ಮಾತ್ರ ಏನೂ ಮಾಡದೇ ಇಳಿಯುವ ಕರ್ಮವನ್ನು ಏರುವ ಕರ್ಮವನ್ನು ನೋಡುತ್ತಿದ್ದಾನೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 34, ಆಯತ್ 2ರಲ್ಲಿ ಹೀಗೆ ಇದೆ ನೋಡಿರಿ. **(34–2) "ಭೂಮಿಯೊಳಗೆ**

**ಹೋಗುವುದು, ಅದರಿಂದ ಬಿಡುಗಡೆಯಾಗುವುದು, ಆಕಾಶದಿಂದ ಇಳಿಯುವುದು, ಅದರೊಳಗೆ (ಆಕಾಶದೊಳಕ್ಕೆ) ಏರಿ ಹೋಗುವುದು ಎಲ್ಲಾ ಆತನಿಗೆ (ದೇವರಿಗೆ) ತಿಳಿದಿದೆ. ಆತನು ಅಪಾರ ಕರುಣಾ ಪ್ರದಾತ, ಕ್ಷಮಾಶೀಲಿ" ಎಂದು ಇದೆ.**

ದೇವರ ಜ್ಞಾನದ ಪ್ರಕಾರವೇ ಕರ್ಮ ಜೀವಿಯ ಮೇಲಕ್ಕೆ ಇಳಿಯುವುದು, ಜೀವಿಯಿಂದ ಕರ್ಮಚಕ್ರದೊಳಕ್ಕೆ ನಮೋದು ಆಗುವುದು, ಖಚಿತವಾಗಿ ನಾವು ದೃಶ್ಯ ರೂಪ ಮಾಡಿಕೊಂಡಿದ್ದೇವೆ. ಕರ್ಮಚಕ್ರದ ಮೇಲೆ ಕಾಲಚಕ್ರ ಇದೆ. ಕಾಲ ಚಕ್ರದಲ್ಲಿ ಪ್ರತಿಯೊಂದಕ್ಕೂ ಕಾಲಾವಧಿ ನಿರ್ಣಯಿಸಲಾಗಿದೆ. ಕಾಲ ಚಕ್ರದಲ್ಲಿ ನಿರ್ಣಯಿಸಿದ ಕಾಲವೊಂದರ ನಿರ್ಣಯದ ಪ್ರಕಾರ ಕೆಳಗೆ ಕರ್ಮ ಚಕ್ರದಲ್ಲಿ ಕರ್ಮ ನಡೆಯುತ್ತಿರುತ್ತದೆ. ಆದ್ದರಿಂದ ಯಾವಾಗ ಮರಣಿಸಬೇಕಾದವನು ಆಗಲೇ ಮರಣಿಸುವನು. ನಡೆಯಬೇಕಾದ ಕಾರ್ಯವೇನಾದರೂ ಆಗಲೀ ಒಂದು ಕ್ಷಣವೂ ಸಹ ವ್ಯತ್ಯಾಸವಿಲ್ಲದೆ ನಡೆಯುತ್ತದೆ. ಅದು ಕಾಲಚಕ್ರದಲ್ಲಿನ ಕಾಲವೊಂದರ ನಿರ್ಣಯವನ್ನು ಯಾರು ಬದಲಾಯಿಸಲಾರರು. ಕಾಲಚಕ್ರವನ್ನು ಕೆಳಗೆ ದೃಶ್ಯರೂಪವಾಗಿ ನೋಡಿಕೊಳ್ಳೋಣ.

ಕಾಲಚಕ್ರ ಒಟ್ಟು ಹನ್ನೆರಡು ಭಾಗಗಳಾಗಿ ಇದೆ. ಒಂದೊಂದು ಭಾಗ ಒಂದೊಂದು ಹೆಸರಿನಿಂದ ಇದೆ. ಪ್ರತಿ ಭಾಗದಲ್ಲೂ ಎರಡು ಗಂಟೆಗಳ ಕಾಲವಿರುತ್ತದೆ. ಆ ಕಾಲಚಕ್ರ, ಕರ್ಮಚಕ್ರ, ಗುಣಚಕ್ರ ಒಂದರೊಂದಿಗೆ ಒಂದು ಸಂಬಂಧಪಟ್ಟಿದ್ದು ತಿರುಗುವುದರಿಂದ, ಬೇರೆಬೇರೆ ಸಮಯಗಳಲ್ಲಿ ಬೇರೆ ಕರ್ಮಗಳನ್ನು, ಬೇರೆಬೇರೆ ಅನುಭವಗಳಾಗಿ ಜೀವಿಯು ಅನುಭವಿಸುತ್ತಿರುವನು. ದೇವರು ತನ್ನ ಜ್ಞಾನದ ಪ್ರಕಾರವೇ ಮನುಷ್ಯನನ್ನು ಸೃಷ್ಟಿಸಿ, ತನ್ನ ಜ್ಞಾನದ ಪ್ರಕಾರವೇ ನಡೆಯುವಂತೆ ಮಾಡಿದ್ದಾನೆ. ದೇವರು ಎಲ್ಲವನ್ನೂ ನೋಡುತ್ತಿದ್ದಾನೆ. ಆತನಿಗೆ ತಿಳಿಯದಂತೆ ಏನೂ ನಡೆಯುವುದಿಲ್ಲ. ದೇವರ ಜ್ಞಾನ ಪರಮಾರ್ಥವನ್ನು, ನಿದರ್ಶನವನ್ನು ಪೂರ್ತಿ ದರ್ಶನವಾಗಿ ನೋಡಿಕೊಂಡರೇ ನಂತರ ಪುಟದಲ್ಲಿ ಚಿತ್ರಿಸಿದ ರೀತಿಯಲ್ಲಿ ಇದೆ ನೋಡಿರಿ.




**ಕಾಲಚಕ್ರ**

ಮನುಷ್ಯ ಶರೀರದಲ್ಲಿ ಮನುಷ್ಯನಿಗೆ ಮೂಲವಾದ ಈ ಚಕ್ರ ಇರುವುದರಿಂದ, ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ "ಊರ್ಧ್ವಮೂಲ" ಎಂದು ಹೇಳಿದ್ದಾರೆ. ಆ ಮಾತಿಗೆ ಮೇಲೆ ಮೂಲವಿದೆಯೆಂದು ಅರ್ಥ.

ದೇವರ ಗ್ರಂಥಗಳಲ್ಲಿ ಇರುವ ದೇವರ ಜ್ಞಾನವನ್ನು ದೃಶ್ಯರೂಪ ಮಾಡಿಕೊಂಡರೇ ಅದು ದೇವರಿಗೆ ಸಂಬಂಧಿಸಿದ ಮುದ್ರೆಯಾಗುತ್ತದೆ. ರಾಜ ಶಾಸನಗಳಿಗೆ ಗುರುತಾಗಿ ರಾಜಮುದ್ರೆ ಇರುವಂತೆ, ದೇವರ ಧರ್ಮಗಳಿಗೆ ಗುರುತಾಗಿ ದೇವರ ಮುದ್ರೆ ಇಲ್ಲವೆ ದೇವರ ಚಿಹ್ನೆ ಇದೆ. ದೇವರ ಚಿಹ್ನೆ, ದೇವರ ಜ್ಞಾನಕ್ಕೆ ಪ್ರತಿರೂಪವಾಗಿ ಇರುವುದರಿಂದ ಅದರಲ್ಲಿ ದೈವಶಕ್ತಿ ಇದೆಯೆಂದು ಹೇಳಬಹುದು. ದೈವಶಕ್ತಿ ಎಲ್ಲಿರುತ್ತದೋ ಅಲ್ಲಿ ಕರ್ಮ ಸುಟ್ಟುಹೋಗುತ್ತದೆ.

ಅಗ್ನಿ ಎಲ್ಲಿದ್ದರೇ ಅಲ್ಲಿ ಉರಿಯುವ ವಸ್ತುಗಳು ಯಾವಿದ್ದರೂ ಅಗ್ನಿಯಿಂದ ಸುಟ್ಟುಹೋಗುವಂತೆ, ದೈವಶಕ್ತಿ ಇರುವ ಕಡೆ ಯಾವ ಕರ್ಮಗಳಿದ್ದರೂ ಜ್ಞಾನಾಗ್ನಿಗೆ ಅಂಟಿಕೊಂಡು ಸುಟ್ಟುಹೋಗುತ್ತವೆ.

**ಪ್ರಶ್ನೆ :–** ನೀವು ದೃಶ್ಯರೂಪವಾಗಿ ತೋರಿಸಿದ ದೇವರ ಚಿಹ್ನಕ್ಕೆ ನಿಜವಾಗಿ ದೈವಶಕ್ತಿ ಇರುತ್ತದೆನ್ನುತ್ತೀರಾ?




**ಉತ್ತರ :–** ದೈವಜ್ಞಾನದಲ್ಲಿನ ಮುಖ್ಯವಾದವುಗಳಲ್ಲಿ 1) ಭೂಮಿ ಆಕಾಶಗಳ ಸೃಷ್ಠಿ ವಿಷಯ. 2) ಮೂರು ಆತ್ಮಗಳ ವಿಷಯ. 3) ಕರ್ಮಗಳೊಂದರ ವಿಷಯ. 4) ಕಾಲನಿರ್ಣಯ ವೊಂದರ ವಿಷಯ ಜ್ಞಾನಗಳು ಇರುವುದರಿಂದ ದೇವರ ಗುರುತಿಗೆ ದೇವರ ಶಕ್ತಿ ಅಂಟಿಕೊಂಡಿದೆ. ಈ ನಾಲ್ಕು ಜ್ಞಾನಗಳು

ವಿನಹಾ ಆಧ್ಯಾತ್ಮಿಕ ಜ್ಞಾನವಿಲ್ಲ. ದೇವರ ಜ್ಞಾನದಲ್ಲಿ ಯಾವುದು ಹೇಳಿದರೂ ಈ ನಾಲ್ಕು ಅಂಶಗಳ ಜ್ಞಾನವೇ ಇರುತ್ತದೆ. ಆಧ್ಯಾತ್ಮಿಕ ಜ್ಞಾನದಲ್ಲಿ ಮೇಲಿನ ನಾಲ್ಕು ಜ್ಞಾನಗಳೇ ಮುಖ್ಯವಾದವು ಆಗುವುದರಿಂದ, ದೇವರ ಮುದ್ರೆಯಾಗಿ ತೋರಿಸಲಾಗಿರುವ ಚಿತ್ರಕ್ಕೆ ಅಥವಾ ಆಕಾರಕ್ಕೆ ದೈವಶಕ್ತಿ ಇರುತ್ತದೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :–** ನೀವು ಒಂದು ಸಂಘಟನೆಯಲ್ಲಿ ಷಫೀ ಎಂಬ ವ್ಯಕ್ತಿಗೆ ಮುಖದ ಮೇಲೆ ದೇವರ ಗುರುತನ್ನು ಧರಿಸೆಂದು ಹೇಳಿದ್ದೀರ. ನೀವು ಅಲ್ಲಿ ಹೇಳಿರುವ ಗುರುತಿಗು, ಇಲ್ಲಿ ತೋರಿಸಿರುವ ಗುರುತಿಗೂ ಏನಾದರೂ ವ್ಯತ್ಯಾಸವಿದೆಯಾ? ಇಲ್ಲವೆ ಎರಡೂ ಒಂದೇನಾ?

**ಉತ್ತರ :–** ಇಲ್ಲಿ ಷಫೀರವರಿಗೆ ಹೇಳಿದ ದೇವರ ಚಿಹ್ನೆ, ಈಗ ಇಲ್ಲಿ ತೋರಿಸಿದ ದೇವರ ಗುರುತು ಎರಡೂ ಒಂದೇ. ಎರಡರಲ್ಲೂ ಒಂದೇ ದೈವಶಕ್ತಿ ಇರುತ್ತದೆ.

**ಪ್ರಶ್ನೆ :–** ದೇವರ ಗುರುತೆಂದು ನೀವು ತೋರಿಸಿದ ಚಿಹ್ನೆ ಒಂದೇ ಆದರೆ ಖುರಾನ್‌ನಲ್ಲಿ ದೇವರ ಚಿಹ್ನೆಗಳು ಎಂದು ಬಹುವಚನವಾಗಿ ಹೇಳಿದ್ದಾರೆ. ನೀವು ಏಕ ವಚನವಾಗಿ ಇರುವ ಒಂದೇ ಗುರುತನ್ನು ತೋರಿಸುತ್ತಿದ್ದೀರಲ್ಲವೆ! ಅಲ್ಲಿ ಖುರಾನ್‌ನಲ್ಲಿ ಹೇಳಿರುವವು ಬೇರೆ ಅಲ್ಲವೆ?

**ಉತ್ತರ :–** ನಾಲ್ಕು ಜ್ಞಾನಗಳಿಗೆ ನಾಲ್ಕು ಗುರುತುಗಳನ್ನು ಬಿಡಿಬಿಡಿಯಾಗಿ ಹೇಳಿದರೇ ಅವುಗಳನ್ನು ದೇವರ ಚಿಹ್ನೆಗಳು ಎಂದೇ ಹೇಳಬೇಕಾಗಿ ಬರುತ್ತದೆ. ಆದರೇ ನಾಲ್ಕು ಜ್ಞಾನಗಳ ಗುರುತುಗಳಾದ ನಾಲ್ಕು ಚಕ್ರಗಳು ಒಂದೇ ಬ್ರಹ್ಮನಾಡಿಯಲ್ಲಿ ಅಂಟಿಕೊಂಡಿರುವುದರಿಂದ ಎಲ್ಲವನ್ನೂ ಸೇರಿಸಿ ಒಂದೇ ಚಿಹ್ನವೆಂದು ಹೇಳಬಹುದು.

**ಪ್ರಶ್ನೆ :–** ದೇವರ ಚಿಹ್ನೆಯಾಗಿರುವ ಆಕಾರಕ್ಕೆ ದೈವಶಕ್ತಿ ಇದೆಯೆಂದು ನಿಮ್ಮೊಂದರ ಊಹೆಯಿಂದ ಹೇಳುತ್ತಿದ್ದೀರಾ? ಅಥವಾ ನಿಮ್ಮ ಅನುಭವದಿಂದ ಹೇಳುತ್ತಿದ್ದೀರಾ?

**ಉತ್ತರ :–** ನಾವು ಊಹೆಗಳಿಂದ, ಆಲೋಚನೆಗಳಿಂದ ಹೇಳುವವರಲ್ಲ. ಯಾವುದಾದರೂ ಶಾಸ್ತ್ರಬದ್ಧತೆ ಕೂಡಿರುವುದಾಗಿ, ಯಥಾರ್ಥ ಸತ್ಯವಾದಾಗಲೇ ಅದನ್ನು ಕುರಿತು ಸತ್ಯವನ್ನು ನಾವು ಹೇಳುತ್ತೇವೆ. ನಾವು ಹೇಳಿರುವುದೆಲ್ಲಾ ಅನುಭವ ಸತ್ಯ. ನಾವು ಇಲ್ಲಿಯವರೆಗು ಅರವತ್ತು ನಾಲ್ಕು ಗ್ರಂಥಗಳನ್ನು ಬರೆದಿದ್ದೇವೆ. ನಾವು ಹೇಳಿದ ಜ್ಞಾನವನ್ನು ಕೇಳಿ ಇತರರು ಸಹ ನಾಲ್ಕು ಗ್ರಂಥಗಳನ್ನು ಬರೆದಿದ್ದಾರೆ. ನಾವು ಬರೆದ ಅರವತ್ನಾಲ್ಕು (64) ಗ್ರಂಥಗಳನ್ನು ಇತರರು ಬರೆದ ನಾಲ್ಕು ಗ್ರಂಥಗಳನ್ನು ನಾವೇ ಮುದ್ರೆ ಹಾಕಿಸಿದ್ದೇವೆ. ಒಟ್ಟು ಅರವತ್ತೆಂಟು ಗ್ರಂಥಗಳಲ್ಲಿಯೂ ಅಷ್ಟೋ ಇಷ್ಟೋ ದೇವರ ಚಿಹ್ನೆಯನ್ನು ಕುರಿತು ಜ್ಞಾನ ಸ್ವಲ್ಪವಾದರೂ ಇರುವುದರಿಂದ, ಆ ಗ್ರಂಥಗಳ ಮೇಲೆ ದೇವರ ಚಿಹ್ನೆಯೊಂದರ ಆಕಾರವಿರುವುದರಿಂದ, ಆ ಗ್ರಂಥಗಳನ್ನು ನಾವು ಒಂದು ಬಾರಿ ಮುಟ್ಟಿರುವುದರಿಂದ, ದೈವಶಕ್ತಿ ಆ ಗ್ರಂಥಗಳಲ್ಲಿಯೂ ಸಂಪೂರ್ಣವಾಗಿ ಸೇರಿರುತ್ತದೆ.

**ಪ್ರಶ್ನೆ :–** ನಿಮ್ಮ ಹತ್ತಿರ ತಯಾರಾದ ಗ್ರಂಥಗಳಿಗೆ ದೈವಶಕ್ತಿ ಇದೆಯೆಂದು ಹೇಗೆ ನಿರೂಪಿಸುತ್ತೀರಾ?

**ಉತ್ತರ :–** ನಿರೂಪಣೆ ಎಂಬ ಪದವನ್ನು ನೀವು ಬಳಸಿದ್ದೀರಲ್ಲವೆ! ಅದರಲ್ಲಿ ರೂಪ ಇಲ್ಲದಿರುವುದು ಎಂದು ಅರ್ಥ. ರೂಪವಿಲ್ಲದ ಜ್ಞಾನವನ್ನು ನಿರೂಪಣ ಅಥವಾ ನಿದರ್ಶನ ಎನ್ನುವುದು ನಮಗೆ ತಿಳಿಯದಿದ್ದರೂ ನಡೆಯುತ್ತಿದೆ. ನಿರೂಪಣ, ನಿದರ್ಶನವಾದ ಜ್ಞಾನವನ್ನು ನಮ್ಮ ಮೆದುಳಿನಲ್ಲಿ ಪ್ರತಿಷ್ಠಿಸಿ ಕೊಂಡಿದ್ದೇವೆ, ಆದ್ದರಿಂದ ನಾವು ಒಂದು ಬಾರಿ ನೋಡಿದರೇ ನಮ್ಮ ಗ್ರಂಥಗಳಲ್ಲಿ ಪೂರ್ತಿ ಶಕ್ತಿ ಮಿಳಿತವಾಗಿ ಹೋಗುತ್ತಿದೆ. ನಿಮಗೆ ನಿರೂಪಣೆಗೆ ಬರಬೇಕೆಂದರೇ ಬಹಳ ನೋವನ್ನು ಅನುಭವಿಸುವವನನ್ನು ತೆಗೆದುಕೊಳ್ಳೋಣ. ಕರ್ಮಗಳ ಅನುಭವ ಎಷ್ಟು ಇರುತ್ತದೋ ನಮಗೆ ಯಾರಿಗೂ ತಿಳಿಯದು, ಆದ್ದರಿಂದ ನಮಗೆ ತಿಳಿದು ಒಂದು ಗಂಟೆ ಬಾಧೆಯನ್ನು ಅನುಭವಿಸುವ ವ್ಯಕ್ತಿಯನ್ನು ತೆಗೆದುಕೊಳ್ಳೋಣ. ಆ ಗಂಟೆಯೋ ಅಥವಾ ಎರಡು ಗಂಟೆಗಳೋ ಹೆಚ್ಚಾಗಿ

ಬಾಧೆಪಡುವವನನ್ನು, ಅವನು ನೋವುಪಡುವಂತೆ ಇತರರು ನೋಡುತ್ತಲೇ ತಿಳಿಯುವಂತೆ ಇರುವವನನ್ನು ತೆಗೆದುಕೊಳ್ಳೋಣ. ಆದರೇ ಬಾಧೆ ಹೊರಗೆ ಕಾಣಿಸುವವನು ನಮಗೆ ಸಿಗಬಹುದಾಗಲೀ, ಗಂಟೆ ಅಥವಾ ಎರಡು ಗಂಟೆಗಳೇ ಅನುಭವವಿರುವವನೆಂದು ತಿಳಿಯದಲ್ಲವೆ! ಆದ್ದರಿಂದ ಗಂಟೆ ಇಲ್ಲವೆ ಎರಡು ಗಂಟೆಗಳ ನೋವು ಇರುವುದಕ್ಕೆ ಚೇಳು ಕಡೆದವನು ಆದರೇ ಸರಿಹೋಗುತ್ತದೆ.

ಚೇಳು ಕಡೆದವನು ವಿಷದ ಬಾಧೆಯನ್ನು ಭರಿಸಲಾರದೇ ಆತನು ನೋವುಪಡುವುದು ಹೊರಗೆ ಚೆನ್ನಾಗಿ ಕಾಣಿಸುತ್ತದೆ. ಕೆಲವು ಚೇಳು ವಿಷಗಳು ಬಹಳ ನೋವನ್ನು ಉಂಟುಮಾಡುವವಾಗಿ ಇರುವುದರಿಂದ ಅದನ್ನು ಅನುಭವಿಸುವವರು ಬಹಳ ಬಾಧೆ ಪಡುತ್ತಿರುವರು. ಅವರ ಬಾಧೆ ಹೇಳಲಾರ ದಷ್ಟಾಗಿ ಇರುತ್ತದೆ. ಚೇಳು ಬಾಧೆ ಎಷ್ಟಿದ್ದರೂ ಒಂದು ಗಂಟೆ ಯಿಂದ ಎರಡು ಗಂಟೆಗಳವರೆಗು ಇಲ್ಲವೆ ಮೂರು ಗಂಟೆಗಳವರೆಗು ಅನುಭವ ಇರುತ್ತದೆ. ಅಂದರೇ ಚೇಳು ಬಾಧೆಗೆ ಸರಿಹೋಗುವ ಕರ್ಮ ಎರಡು ಅಥವಾ ಮೂರು ಗಂಟೆಗಳಗಿಂತ ಹೆಚ್ಚಾಗಿ ಇರುವುದಿಲ್ಲ. ಈಗ ಚೇಳು ಕಡೆದವನ ಬಾಧೆಯನ್ನು ಅವರು ಪೂರ್ತಿ ಅನುಭವಿಸಾದರೂ ಅನುಭವಿಸಬೇಕು ಇಲ್ಲವೆ ದೇವರಾದರೂ ಕ್ಷಮಿಸಬೇಕು. ದೇವರು ಕ್ಷಮಿಸುವುದು ಎಂದರೇ ದೇವರ ಶಕ್ತಿ ಅವನ ಕರ್ಮವನ್ನು ಇಲ್ಲದಂತೆ ಸುಟ್ಟುಹಾಕುವುದರಿಂದ ಅವನ ಬಾಧೆಯನ್ನು ಅವನು ಅನುಭವಿ ಸುವುದು ಇಲ್ಲದಂತಾಗುತ್ತದೆ.

**ಪ್ರಶ್ನೆ :–** ನೀವು ಹೇಳಿದ ಮಾತು ಎಲ್ಲಾದರೂ ಶಾಸ್ತ್ರಬದ್ಧವಾಗಿ ಇದೆಯಾ? ಇಲ್ಲವೆ ಮೂಢನಂಬಿಕೆಯಂತೆ ಹೇಳುತ್ತಿದ್ದೀರಾ?

**ಉತ್ತರ :–** "ನಾವು ಶಾಸ್ತ್ರಬದ್ಧವಲ್ಲದ ವಿಷಯವನ್ನು ಹೇಳುವುದಿಲ್ಲ" ಎಂದು ಮೊದಲೇ ಹೇಳಿದ್ದೀವಲ್ಲವೆ! ನಾವು ಹೇಳುವ ಮಾತಿಗೆ ಶಾಸ್ತ್ರಬದ್ಧತೆ ಬೇಕೆಂದರೇ ಪ್ರಥಮ ದೈವಗ್ರಂಥವಾದ ಭಗವದ್ಗೀತಾ ಗ್ರಂಥದಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಹೇಳಿದ್ದಾರೆ. ನೋಡಿರಿ.

**ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ಭಸ್ಮಸಾತ್ಕುರುತೇರ್ಜುನ! ।**
**ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**

**ಭಾವಾರ್ಥ :–** "ಕಟ್ಟಿಗೆಗಳು ಅಗ್ನಿಯಲ್ಲಿ ಬಿದ್ದರೇ ಯಾವ ರೀತಿ ಸುಟ್ಟು ಬೂದಿ ಆಗುತ್ತವೋ, ಅದೇ ರೀತಿ ಜ್ಞಾನವೆಂಬ ಅಗ್ನಿಯಲ್ಲಿ ಕರ್ಮಗಳೆಂಬ ಕಟ್ಟಿಗೆಗಳು ಸುಟ್ಟುಹೋಗುತ್ತವೆ" ಭಗವದ್ಗೀತೆಯಲ್ಲಿ ಹೇಳಿದರ ಪ್ರಕಾರ ಜ್ಞಾನಾಗ್ನಿ ಎಲ್ಲಿದ್ದರೂ ಅಲ್ಲಿರುವ ಕರ್ಮ ಕಟ್ಟಿಗೆಗಳನ್ನು ಸುಟ್ಟುಹಾಕುತ್ತವೆ. ಶಾಸ್ತ್ರಬದ್ಧವಾಗಿ ಜ್ಞಾನದಿಂದ ತಯಾರಾದ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳನ್ನು ದೇವರ ಚಿಹ್ನೆಯಲ್ಲಿ ಜ್ಞಾನಾಗ್ನಿ ಇರುವುದರಿಂದ ಅದು ತನ್ನ ಪರಿಧಿಯಲ್ಲಿನ ಕರ್ಮಗಳನ್ನು ಸುಟ್ಟುಹಾಕುತ್ತವೆ. ಎರಡು ಗಂಟೆಗಳು ಅಥವಾ ಅದಕ್ಕಿಂತ ಹೆಚ್ಚಿನ ಕಾಲ ಬಾಧೆ ಇರುವ ಚೇಳು ವಿಷದ ನೋವು ಎಲ್ಲಿದೆಯೋ ನೋಡಿ, ದೈವ ಚಿಹ್ನೆ ಯಿರುವ ನಮ್ಮ ಗ್ರಂಥಗಳಲ್ಲಿ ಯಾವ ಗ್ರಂಥವಾದರೂ ಒಂದು ಗ್ರಂಥವನ್ನು ಅಲ್ಲಿ ಇಡುವುದರಿಂದ, ಆತನ ಬಾಧೆ ನಾಲ್ಕು ಅಥವಾ ಐದು ನಿಮಿಷಗಳಲ್ಲಿ ನಿವಾರಿಸಲಾಗುತ್ತದೆ. ಚೇಳು ನೋವು ಇರುವ ಪ್ರದೇಶದಲ್ಲಿ ನಮ್ಮ ಗ್ರಂಥವನ್ನು ಇರಿಸಿದ ಕೂಡಲೇ ಗ್ರಂಥ ಕೆಬ್ಬಿನದ ತುಂಡಿಗೆ ಅಯಸ್ಕಾಂತ ಅಂಟಿಕೊಂಡಹಾಗೆ ಅಲ್ಲೇ ಅಂಟಿಕೊಂಡು ಹೋಗುತ್ತಿದೆ. ಹಾಗೆ ಅಂಟಿಕೊಂಡಾಗ ಸ್ವಲ್ಪ ಬಲವನ್ನು ಪಯೋಗಿಸಿ ಎಳೆದರೂ ಆ ಗ್ರಂಥ ಬಿಚ್ಚಿ ಬರುವುದಿಲ್ಲ. ಹಾಗೆ ಹಚ್ಚಿಕೊಂಡ ಗ್ರಂಥ ಸುಮಾರು ಐದಾರು ನಿಮಿಷಗಳ ನಂತರವಾಗಲೀ ಬಿಚ್ಚಿಬರುವುದಿಲ್ಲ. ಯಾವಾಗಾದರೇ ಅವನ ಕರ್ಮ ಎಲ್ಲವೂ ಸುಟ್ಟುಹೋಗಿ ಅವನ ಬಾಧೆ ನಿವಾರಣ ಆಗುತ್ತಿದೆಯೋ ಆಗ ಆ ಗ್ರಂಥ ಬಿಚ್ಚಿ ಬರುತ್ತಿದೆ. ಅಲ್ಲಿಯವರೆಗು ಗ್ರಂಥದಲ್ಲಿನ ಜ್ಞಾನಾಗ್ನಿ ಆತನು ಅನುಭವಿಸುವ ಕರ್ಮವನ್ನು ಸುಟ್ಟುಹಾಕುತ್ತಿರುವಂತೆ ಅರ್ಥವಾಗುತ್ತಿದೆ. ಇದು ಪ್ರತ್ಯಕ್ಷ ಅನುಭವ ಸತ್ಯ.

ಎರಡು ಗಂಟೆಗಳ ಕರ್ಮ ಸುಟ್ಟುಹೋಗುವುದಕ್ಕೆ ಸುಮಾರು ನಾಲ್ಕರಿಂದ ಐದು ಅಥವಾ ಆರು ನಿಮಿಷಗಳ ಕಾಲ ಹಿಡಿದರೇ, ಅದಕ್ಕಿಂತ ಕಡಿಮೆ ಕರ್ಮವನ್ನು ಬೇಗನೇ ಸುಟ್ಟುಹಾಕುತ್ತದೆಂದು ಹೇಳಬಹುದು. ಕೆಲವು ತಿಂಗಳು

ಸಂವತ್ಸರಗಳು ಅನುಭವಿಸುವ ಕರ್ಮವನ್ನು ಸುಡುವುದಕ್ಕೆ ಹೆಚ್ಚಿನ ಕಾಲ ಹಿಡಿಯುತ್ತದೆ. ನಮಗೆ ನಿರೂಪಣೆಗೆ ಬರುವುದಕ್ಕೆ ಉದಾಹರಣೆಯಾಗಿ ಚೇಳು ಕಡೆದವರನ್ನು ದೇವರ ಗುರುತಿನಿಂದ ಅವರ ಪಾಪಗಳನ್ನು ಕೆಲವು ನಿಮಿಷಗಳಲ್ಲೇ ಸುಟ್ಟುಹಾಕಬಹುದು. ಇದು ಪ್ರತ್ಯಕ್ಷ ನಿರೂಪಣೆ. ಪ್ರತ್ಯಕ್ಷವಾಗಿ ನಮ್ಮ ಗ್ರಂಥಗಳನ್ನು ಇಟ್ಟುಕೊಂಡು ತುಂಬಾ ಜನ ಅವರ ಕರ್ಮಗಳನ್ನು ಸುಟ್ಟುಕೊಂಡಿರುವ ಸಂದರ್ಭಗಳು ಇವೆ. ದೇವರ ಚಿಹ್ನೆಯನ್ನು ಧರಿಸಿದವನಾಗಲೀ ದೇವರ ಚಿಹ್ನದ ಮೇಲೆ ನಂಬಿಕೆ ಇರುವವರಾಗಲೀ ಅವರ ಕರ್ಮಗಳನ್ನು ಅವರೇ ಸುಟ್ಟಿಕೊಂಡ ಸಂದರ್ಭಗಳು ಅನೇಕವಾಗಿ ಇವೆ. ದೈವಗ್ರಂಥಗಳ ಬೆಳಕಿನಲ್ಲಿ ನಾವು ದೇವರ ಚಿಹ್ನೆಯನ್ನು ನಿರೂಪಣೆಯಾಗಿ ಇದೆಯೆಂದೂ, ಅದನ್ನು ರೂಪ ಮಾಡಬಹು ದೆಂದೂ, ಅದೇ ದೇವರ ಗುರುತೆಂದು, ಅದೇ ಎಲ್ಲ ಮತಗಳಿಗೂ ಸಂಬಂಧಿ ಸಿರುವುದೆಂದೂ, ಅದು ಯಾವ ಒಂದು ಮತಕ್ಕು ಸಂಬಂಧವಿಲ್ಲ ವೆಂದೂ, ಹೇಳಿದಾಗ ನಮ್ಮನ್ನು ಅರ್ಥ ಮಾಡಿಕೊಳ್ಳದವರು ಅವರು ನಾವು ದೈವ ಗ್ರಂಥಕ್ಕೆ ವಿರುದ್ಧವಾಗಿ ಮಾತನಾಡುತ್ತಿದ್ದೇವೆಂದು 'ಫೇಸ್‌ಬುಕ್'ನಲ್ಲಿ ಹೀಯಾಳಿಸಿ ಮಾತನಾಡಿದ್ದಾರೆ. ನಾವು ಹೇಳಿದ ಜ್ಞಾನಾಗ್ನಿ ಇಲ್ಲವೆ ದೈವಶಕ್ತಿ ನಿಮ್ಮ ಹತ್ತಿರ ಇದೆಯೇನೋ ಸ್ವಲ್ಪ ಆಲೋಚಿಸಿಕೊಳ್ಳಿ. ಪ್ರತ್ಯಕ್ಷವಾಗಿ ಕರ್ಮ ಸುಟ್ಟುಹೋಗುವ ವಿಧಾನವನ್ನು ನೋಡಿದವರು ಅವರ ಗ್ರಂಥಗಳಲ್ಲಿ ಯಾವುದೋ ಮಾಯ, ಮಂತ್ರಗಳು ಇವೆಯೆಂದು ಸಹ ಹೇಳಿದ್ದಾರೆ. ನಾವು ಬರೆದ ಹಿಂದೂಗಳ ಗ್ರಂಥಗಳಲ್ಲಿ ಮಾಯ ಮಂತ್ರ ಇರಬಹುದೆಂದುಕೊಳ್ಳೋಣ. 33 ಸಂವತ್ಸರಗಳ ಒಬ್ಬ ಮುಸ್ಲಿಮ್ ಯುವತಿ ಬರೆದ **"ಖುರಾನ್‌ನಲ್ಲಿ ಆಣಿಮುತ್ಯಗಳು"** ಎಂಬ ಮುಸ್ಲಿಮ್ ಗ್ರಂಥದಲ್ಲಿ ಸಹ ಮಾಯೆ ಮಂತ್ರಗಳಿವೆಯೆಂದು ಹೇಳಬಲ್ಲಿರಾ?

ಚಿಕ್ಕ ವಿಷ ಹುಳ ಒಬ್ಬ ಹೆಣ್ಣುಮಗಳಿಗೆ ಎದೆಗೆ ಮೇಲೆ ಕುತ್ತಿಗೆ ಕೆಳಗೆ ಕಡೆದಾಗ ಅದರ ವಿಷ ಪ್ರಭಾವಕ್ಕೆ ಬಾವು ಉರಿ ಬಂದಿದ್ದರೇ, ಆಕೆ ತನಗೆ ಹತ್ತಿರದಲ್ಲಿರುವ **"ಖುರಾನ್‌ನಲ್ಲಿ ಆಣಿಮುತ್ಯಗಳು"** ಎಂಬ ಗ್ರಂಥವನ್ನು ಹುಳ ಕಡೆದ ಜಾಗದಲ್ಲಿ ಇಟ್ಟಾಗ, ಅದು ಗಟ್ಟಿಯಾಗಿ ಅಂಟಿಕೊಂಡು ಸ್ವಲ್ಪ ಹೊತ್ತು

ಎಳೆದರೂ ಬಾರದಂತೆ ಇರುವುದನ್ನು ಪ್ರತ್ಯಕ್ಷವಾಗಿ ನೋಡಿದವರು ಇದ್ದಾರೆ. ಆ ದೃಶ್ಯವನ್ನು ನನಗೆ ತೋರಿಸಬೇಕೆಂದು ಸೆಲ್‌ಫೋನ್‌ನಲ್ಲಿ ಚಿತ್ರಿಸಿ ತೋರಿಸಿದ್ದಾರೆ. ಖುರ್‌ಆನ್‌ನಲ್ಲಿ ಆಣಿಮುತ್ಯಗಳು ಎಂಬ ಗ್ರಂಥ ಅರಬ್ಬೀ, ಉರ್ದೂ, ಇಂಗ್ಲೀಷ್, ತೆಲುಗು ಭಾಷೆಗಳಲ್ಲಿ ಇರುವ ಗ್ರಂಥ. ಆ ಗ್ರಂಥ ಆಕೆಗೆ ಅಂಟಿಕೊಂಡಿರುವಾಗ ಆಕೆ ಜೋರಾಗಿ ಎಳೆದರೂ ಅದು ಬರಲಿಲ್ಲ. ಜೋರಾಗಿ ಎಳೆಯುತ್ತಿದ್ದರೇ ಕೈ ಜಾರಿ ಹೋದಾಗ ಗ್ರಂಥ ಜಾರಿಹೋದ ಶಬ್ದ ಕೇಳಿಸುತ್ತಿದೆಯಾಗಲೀ ಅದು ಬರಲಿಲ್ಲ. ಇದೆಲ್ಲಾ ನಿಮಗೆ ಹೊಸದಾಗಿ ಕಾಣಿಸಬಹುದು, ಆದರೂ ನೂರಕ್ಕೆ ನೂರುಪಾಲು ಸತ್ಯ. ಗ್ರಂಥದಲ್ಲಿನ ಜ್ಞಾನವೊಂದರ ಬೆಲೆಯನ್ನು, ದೇವರ ಗುರುತು ವೊಂದರ ಶಕ್ತಿಯನ್ನು ಕುರಿತು ನಾವು ಹೇಳಿರುವಾಗ, ಕೇಳಿದ ಬಹಳ ಜನರು ಅವರಷ್ಟಕ್ಕವರೇ ಗ್ರಂಥಗಳನ್ನು ಅವರ ನೋವುಗಳ ಹತ್ತಿರ ಇಟ್ಟುಕೊಂಡು ಆ ಕರ್ಮಗಳನ್ನು ಕಳೆದುಕೊಳ್ಳುತ್ತಿದ್ದಾರೆ. ನಾವು ಇಲ್ಲಿಯವರೆಗು ಪ್ರತ್ಯಕ್ಷವಾಗಿ ಯಾರಿಗೂ ಈ ಪ್ರಯೋಗವನ್ನು ಮಾಡಲಿಲ್ಲ. ಮಾಡಿದವರು ಹೇಳಿದಾಗ ಕೇಳಿದ್ದೇವೆ, ವೀಡಿಯೋಗಳಲ್ಲಿ ಚಿತ್ರಿಸಿ ತೋರಿಸಿದಾಗ ನೋಡಿದ್ದೇವೆ. ನಾವು ಹೇಳುವುದು ಸತ್ಯ ಎಂದು ತಿಳಿಯುವಹಾಗೆ ಗ್ರಂಥಗಳು ಶರೀರಕ್ಕೆ ಅತ್ತಿಕೊಂಡಿರುವ ಫೋಟೋಗಳನ್ನು 81ನೇ ಪುಟದಲ್ಲಿ ನೋಡಿರಿ.

ದೈವಗ್ರಂಥಗಳಲ್ಲಿ ಎಲ್ಲಾದರೂ ಸ್ವಲ್ಪ ಕಲ್ಪಿತ ಕಾಲುಷ್ಯ ಇರಬಹುದೇನೋ ಆದರೇ, ನಮ್ಮ ಗ್ರಂಥಗಳಲ್ಲಿ ಅಜ್ಞಾನ ಕಾಲುಷ್ಯವಾಗಲೀ, ಕಲ್ಪಿತ ಕಾಲುಷ್ಯವಾಗಲೀ ಇರುವುದಿಲ್ಲ. ನಾವು ದೇವರ ಜ್ಞಾನವನ್ನು ಗೌರವಿಸಬೇಕೆನ್ನುವವರೇಯಾಗಲೀ ಅಗೌರವಪಡಿಸಬೇಕೆನ್ನುವವರಲ್ಲ. ನಾವು ಒಂದು ಮತಕ್ಕೆ ಸಂಬಂಧಿಸಿ ಅಲ್ಲದೆ, ಎಲ್ಲ ಮತಗಳಲ್ಲಿ ಎಲ್ಲಿ ಪ್ರಜೆಗಳು ಅರ್ಥವನ್ನು ಅಪಾರ್ಥ ಮಾಡಿಕೊಂಡಿದ್ದಾರೋ ಅಲ್ಲಿ ಪುನಃ ಅರ್ಥ ಹೇಳಬೇಕೆನ್ನುವುದೇ ನಮ್ಮ ಉದ್ದೇಶ. ನಾವು ಒಂದು ಮತವನ್ನು ಸಮರ್ಥಿಸುವುದಾಗಲೀ, ಅಸಮರ್ಥಿಸುವುದಾಗಲೀ ಇರುವುದಿಲ್ಲ. ಆದರೇ ಕೆಲವರು ನಮ್ಮ ಉನ್ನತವಾದ ಭಾವವನ್ನು ತಿಳಿಯಲಾರದೇ ನಮ್ಮನ್ನು ಸಹ ದೂಷಣ ಭಾವದಿಂದ ಮಾತನಾಡುತ್ತಿರುವರು. ಪ್ರತಿಯೊಬ್ಬರು ಯಾರ

ಮತವನ್ನು ಕುರಿತು ಅವರು ಹೆಚ್ಚಾಗಿ ಹೇಳುವುದು, ಇತರರ ಮತವನ್ನು ಕುರಿತು ಕಡಿಮೆ ಮಾಡಿ ಮಾತನಾಡುವುದು ನಡೆಯುತ್ತಿದೆ. ಅಂತಹವರು ಎಲ್ಲರಿಗೂ ದೇವರು ಒಬ್ಬನೇ ಎಂಬ ಮಾತನ್ನು ಮರೆತುಹೋಗಿ, ಒಂದೊಂದು ಮತಕ್ಕೆ ಒಂದೊಂದು ದೇವರೆಂದು ಹೇಳುತ್ತಿರುವರು. ಅಂತಹವರು ಸಂಕುಚಿತ ಭಾವಿರುವವರೇಯಾಗಲೀ ವಿಶಾಲ ಭಾವ ಇಲ್ಲದವರೆಂದು ತಿಳಿಯುತ್ತಿದೆ. ಅವರ ಮತ ಅಭಿಮಾನ ಅವರನ್ನು ಅಜ್ಞಾನಿಗಳಾಗಿ ಮಾಡುತ್ತಿದೆ.

ಮತಾಭಿಮಾನಿ ಇತರ ಮತಗಳನ್ನು ದೂಷಿಸುವುದೇ ಅಲ್ಲದೆ, ತಮ್ಮ ದೈವಗ್ರಂಥವೆಂದು ಹೇಳಿಕೊಳ್ಳುವ ಗ್ರಂಥದಲ್ಲಿರುವ ಸತ್ಯವನ್ನು ತಿಳಿಯಲಾರದೆ ಹೋಗುತ್ತಿದ್ದಾನೆ. ತನ್ನ ಗ್ರಂಥದಲ್ಲಿನ ವಾಕ್ಯಗಳಿಗೆ ನಿಜಭಾವವನ್ನು ತಿಳಿಯಲಾರದೆ, ಆ ವಾಕ್ಯದಿಂದ ತಪ್ಪು ಸಮಾಚಾರವನ್ನು ಸ್ವೀಕರಿಸಿ, ಅದೇ ಸಮಾಚಾರವನ್ನು ತಮ್ಮ ಸಂಘದವರೆಲ್ಲರಿಗೂ ಬೋಧಿಸಿ, ಎಲ್ಲರನ್ನೂ ತಪ್ಪು ದಾರಿ ಹಿಡಿಸಿ, ಎಲ್ಲರನ್ನೂ ವ್ಯಥೆಗಳ ಪಾಲಾಗುವಂತೆ ಮಾಡುತ್ತಿದ್ದಾರೆ. ಸತ್ಯವನ್ನು ಹೇಳಿ ಇದನ್ನು ಬಳಸಬೇಡ ಎಂದು ಹೇಳಿದರೇ ಬಳುಸುವುದಿಲ್ಲ ಆದರೇ, ಯಾವಾಗ ಬಳಸಬಾರದೆಂದು ಆಲೋಚಿಸುವುದಿಲ್ಲ. ರೋಗ ಬಂದಾಗ ಇದನ್ನು ಬಳಸಬಾರ ದೆಂದರೇ, ಅದನ್ನು ಅರ್ಥ ಮಾಡಿಕೊಳ್ಳದೇ ರೋಗ ಇಲ್ಲದಿರುವಾಗಲೂ ಸಹ ಬಳಸದಂತೆ ಇರುವುದು ಬುದ್ಧಿ ಕಡಿಮೆ ಕೆಲಸವಲ್ಲವೆ!

ಅದೇ ರೀತಿ ಖುರಾನ್ ಗ್ರಂಥದಲ್ಲಿ ದೇವರು ಒಂದು ಹೇಳಿದರೇ, ಅದನ್ನು ಅವರು ಅರ್ಥ ಮಾಡಿಕೊಳ್ಳದೇ ಮತ್ತೊಂದು ರೀತಿಯಲ್ಲಿ ತಾವು ಅರ್ಥ ಮಾಡಿಕೊಳ್ಳುವುದು ನಡೆದಿದೆ. ಮುಸ್ಲಿಮ್ ಹಿರಿಯರು ಹೇಳಿದಂತೇ ಉಳಿದ ಮುಸ್ಲಿಮ್‌ರೆಲ್ಲರೂ ಕೇಳಬೇಕೆಂಬ ನಿಯಮ ಇರುವುದರಿಂದ, ಒಬ್ಬ ಹಿರಿಯರಿಗೆ ಅರ್ಥವಾದ ವಿಷಯವೇ ಎಲ್ಲರಿಗೂ ಹರಡುತ್ತಿದೆ. ಆ ರೀತಿ ಮುಖ್ಯವಾದ ವ್ಯಕ್ತಿ ಒಬ್ಬರು ತಪ್ಪು ದಾರಿ ಹಿಡಿದರೇ, ಉಳಿದವರೆಲ್ಲಾ ತಪ್ಪು ದಾರಿ ಹಿಡಿಯುವ ಅವಕಾಶವಿದೆ. ಖುರಾನ್ ವಿಷಯದಲ್ಲಿ ಅದೇ ನಡೆದಿದೆ. ಸೂರಾ 2, ಆಯುತ್ 187ರಲ್ಲಿ ಇರುವ ಸವಾಚಾರ ಇಂದಿಗೂ

ಅರ್ಥವಾಗಲಿಲ್ಲವೆಂದೇ ಹೇಳಬಹುದು. ಅಲ್ಲಿ ದೇವರು ಒಂದನ್ನು ನಿಷೇಧ ಎಂದು ಹೇಳಿದರೇ, ಈ ದಿನ ದೇವರು ಹೇಳಿರುವುದನ್ನು ನಿಷೇಧಿಸದೇ, ತಪ್ಪಾಗಿ ಮತ್ತೊಂದನ್ನು ನಿಷೇಧಿಸಿಕೊಂಡಿದ್ದಾರೆ. ಹಾಗೆ ಮಾಡುವುದರಿಂದ ಮಾಡದ ತಪ್ಪಿಗೆ ಎಲ್ಲರೂ ಶಿಕ್ಷೆ ಅನುಭವಿಸಿದಂತೆ ಆಗಿದೆ. ದೇವರು ಖುರಾನ್ ಗ್ರಂಥದಲ್ಲಿ ಕೆಲವು ವಾಕ್ಯಗಳಲ್ಲಿ ಎಷ್ಟೋ ವಿಪುಲವಾಗಿ ಹೇಳುತ್ತಿದ್ದೇನೆ, ಎಷ್ಟೋ ವಿಶದವಾಗಿ ಹೇಳುತ್ತಿದ್ದೇನೆ, ಎಷ್ಟೋ ವಿಶದೀಕರಿಸಿ ಹೇಳುತ್ತಿದ್ದೇನೆ ಎಂದು ಹೇಳಿದ್ದಾನೆ. ಏಕೆ ಅಷ್ಟು ಚಿಕ್ಕ ವಿಷಯ ಅರ್ಥವಾಗಲಿಲ್ಲವೋ ಹೇಳುವುದಕ್ಕೆ ಅವಕಾಶವಿಲ್ಲದಂತಾಗಿದೆ. ಒಂದು ವಿಧವಾಗಿ ಇಲ್ಲಿ ಎಲ್ಲರನ್ನೂ ದೇವರೇ ಉದ್ದೇಶಪೂರ್ವಕವಾಗಿ ತಪ್ಪುದಾರಿ ಹಿಡಿಸಿದ್ದಾನೆಂದು ಅರ್ಥವಾಗುತ್ತಿದೆ.

ಸೂರಾ 2, 187 ನೇ ಆಯತ್‌ನಲ್ಲಿ ಮೊದಲು ಮಾಡಿದ ವಿಷಯ ಎಲ್ಲರಿಗೂ ಅರ್ಥವಾಗುವಂತೆ ಇದೆ. ವಾಕ್ಯವೆಲ್ಲಾ ಮೊದಲು ಮಾಡಿದ ವಿಷಯವನ್ನೇ ಹೇಳಿದ್ದಾರೆ. ವಾಕ್ಯದ ಕೊನೆಯಲ್ಲಿ ಸಹ ಮೊದಲು ಹೇಳಿರುವ ವಿಷಯವನ್ನು ಕುರಿತು ಹೇಳುತ್ತಾ ಆಯತ್‌ನ್ನು ಮುಗಿಸಲಾಯಿತು. ಈ ವಾಕ್ಯದಲ್ಲಿ ಬಚ್ಚಿಟ್ಟಾಗಲೀ, ಮುಚ್ಚಿಟ್ಟಾಗಲೀ ಹೇಳಿರುವುದು ಏನೂ ಇಲ್ಲ. ಮೊದಲಿಗೆ ಇದು ಸೂಕ್ಷ್ಮವಾದ (ಮುತಷಾಬಿಹಾತ್) ವಾಕ್ಯದಲ್ಲಿ ಹೇಳಿರುವುದೆಲ್ಲಾ ಸ್ಥೂಲವಾದ ವಿಷಯವೇ. ಹಾಗಿರುವಾಗ ಆ ವಾಕ್ಯದಲ್ಲಿ ಪೂರ್ತಿ ಸಮಾಜವೆಲ್ಲಾ ಎಂದರೇ ಕೆಲವು ಕೋಟಿ ಮಂದಿ ದೇವರು ಹೇಳಿದ ವಿಷಯವನ್ನು ಬಿಟ್ಟು, ಪೂರ್ತಿಯಾಗಿ ಸಂಬಂಧವಿಲ್ಲದ ವಿಷಯಗಳಲ್ಲಿ ಮುಳುಗಿದ್ದಾರೆ. ಹಾಗೆ ಆ ವಿಷಯ ಪೂರ್ತಿ ಸಮಾಜದಲ್ಲಿ ಹರಡಿಹೋಗುವುದರಿಂದ ಎಲ್ಲರೂ ಇಷ್ಟವಿದ್ದರೂ, ಇಷ್ಟವಿಲ್ಲದಿದ್ದರೂ ಆ ನಿಯಮವನ್ನು ಪಾಲಿಸಬೇಕಾಗಿ ಬಂದಿತು. ದೇವರ ಆಜ್ಞ ಎಂಬ ಭಯದಿಂದ ಎಲ್ಲರೂ ತಮ್ಮ ಹಿರಿಯರು ಹೇಳಿದಂತೆ ನಡೆ ಯುತ್ತಿದ್ದಾರೆ. ಹಾಗೆ ನಡೆಯುವುದರಿಂದ ಏನಾದರೂ ದೇವರ ವಿಷಯದಲ್ಲಿ ಪ್ರಯೋಜನವಿದೆಯಾ ಎಂದು ಆಲೋಚಿಸಿದರೇ, ದೇವರು ಹೇಳದ ವಿಷಯವನ್ನು ಆಚರಿಸುವುದರಿಂದ ಮತ್ತು ದೇವರು ಹೇಳಿದ ವಿಷಯವನ್ನು

ಬಿಟ್ಟು ಹಾಕುವುದರಿಂದ, ದೇವರ ಜ್ಞಾನಕ್ಕೂ ದೇವರ ಮಾತಿಗೂ ವಿರುದ್ಧವಾಗಿ ಪ್ರವರ್ತಿಸಿದಂತಾಗುತ್ತದೆ. ಅದ್ದರಿಂದ ದೇವರಿಗೆ ಹತ್ತಿರವಾಗುವುದಕ್ಕೆ ಬದಲಾಗಿ, ದೇವರಿಗೆ ದೂರವಾಗುವುದು ನಡೆಯುತ್ತಿದೆ. ಸ್ಥೂಲ ಜ್ಞಾನ ವಿಷಯದಲ್ಲೇ ಇಷ್ಟು ತಪ್ಪಾಗಿ ಅರ್ಥೈಸಿಕೊಂಡಾಗ, ಸೂಕ್ಷ್ಮ ಜ್ಞಾನ ವಿಷಯದಲ್ಲಿ ಎಷ್ಟೋ ತಪ್ಪಾಗಿ ಅರ್ಥೈಸಿಕೊಳ್ಳುವುದಕ್ಕೆ ಅವಕಾಶವಿದೆ.

ಇವೆಲ್ಲಾ ನಾವು ಏಕೆ ಹೇಳಬೇಕಾಗಿ ಬಂದಿದೆಯೆಂದರೇ! ನಾವು 'ನಮ್ಮ' 'ನಿಮ್ಮ' ಎಂಬ ಮತ ಪ್ರಸ್ತಾವನೆ ಇಲ್ಲದಂತೆ ಮನುಷ್ಯರೆಲ್ಲಾ ಒಂದೇ, ಎಲ್ಲರಿಗೂ ದೇವರು ಒಬ್ಬನೇ ಎಂಬ ಉದ್ದೇಶದಿಂದ, ಯಾವ ಮತದವರು ದೇವರ ವಾಕ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ಹೋದರೂ, ಅವರನ್ನು ತಟ್ಟಿ ಏಳಿಸಿ ನೀವು ಇಲ್ಲಿ ತಪ್ಪಾಗಿ ತಿಳಿದಿದ್ದೀರ ಎಂದು ಹೇಳುವುದು ನಮ್ಮ ಜವಾಬ್ದಾರಿಯಾಗಿ ಇಟ್ಟುಕೊಂಡಿದ್ದೇವೆ. ಆದ್ದರಿಂದ ನಾವು ಮೂರು ಗ್ರಂಥಗಳ ವಿಷಯಗಳನ್ನು ವಿಪುಲೀಕರಿಸಿ ಶಾಸ್ತ್ರಬದ್ಧವಾಗಿ, ಹೇತುಬದ್ಧವಾಗಿ ಹೇಳುತ್ತಿದ್ದೇವೆ. ಹೇಳುವುದಷ್ಟೇ ನಮ್ಮ ಜವಾಬ್ದಾರಿ, ಕೇಳಿದವರೆಲ್ಲಾ ನನ್ನ ಮಾತನ್ನು ಅನುಸರಿಸೆಂದು ನಾವು ಹೇಳುತ್ತಿಲ್ಲ. ದೇವರ ಜ್ಞಾನವನ್ನು ಕೇಳಿದವರು ಜ್ಞಾನಮಾರ್ಗದಲ್ಲಿ ಹೋಗುವುದು, ಅಜ್ಞಾನ ಮಾರ್ಗದಲ್ಲಿ ಹೋಗುವುದು ದೇವರೇ ನಿರ್ಣಯಿಸುತ್ತಾನೆ. ತನಗೆ ಇಷ್ಟವಾದವರನ್ನು ಜ್ಞಾನಮಾರ್ಗದಲ್ಲಿ ಕಳುಹಿಸುವನು, ತನಗೆ ಇಷ್ಟವಿಲ್ಲದವರನ್ನು ಅಜ್ಞಾನ ಮಾರ್ಗದಲ್ಲಿ ಕಳುಹಿಸುವನು. ಆ ವಿಷಯದಲ್ಲಿ ಯಾವ ಮನುಷ್ಯನ ಪ್ರಮೇಯವೂ ಇರುವುದಿಲ್ಲ. ಎಲ್ಲಾ ಅಲ್ಲಾಹ್ ಇಷ್ಟದ ಮೇಲೆ ಆಧಾರಪಟ್ಟಿರುತ್ತದೆ. ಮನುಷ್ಯನಿಗಿರುವ ಶ್ರದ್ಧೆಯನ್ನನು ಸರಿಸಿ, ಬುದ್ಧಿಯನ್ನನುಸರಿಸಿ ದೇವರ ಕರುಣೆಗೆ ಮನುಷ್ಯ ಪಾತ್ರನಾಗಬಹುದು.

ನಮ್ಮ ಹತ್ತಿರ ಮತ ಬೇಧಗಳು ಇಲ್ಲ ಹಾಗೇ ಕುಲಭೇದಗಳು ಸಹ ಇಲ್ಲ. ಆದ್ದರಿಂದ ನಾವು ಒಂದು ಪ್ರಕಟನೆಯಲ್ಲಿ **"ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ ಅಶಾಸ್ತ್ರೀಯ. ಕುಲ ಮತಗಳಿಗೆ ಅತೀತ ಭಾವಗಳಿರುವವರು ಪ್ರಬೋಧ ಸೇವಾಸಮಿತಿ ಎಂಬ ನಮ್ಮ ಸಂಘದಲ್ಲಿ ಸೇರಿರಿ"** ಎಂದು ಹೇಳಲಾಗಿದೆ.

ನಮ್ಮ ಜ್ಞಾನವನ್ನು ಕೇಳಿದವರು ಎಷ್ಟೋ ಜನ ನಮ್ಮ ಹತ್ತಿರಕ್ಕೆ ಬರುವುದು ನಡೆದಿದೆ. ಆದ್ದರಿಂದ ಎಲ್ಲ ಮತಗಳವರು ಒಂದೇ ದಾರಿಯಲ್ಲಿ ಅಸಲಾದ ದೈವಜ್ಞಾನದಲ್ಲಿ ಇದ್ದಾರೆ.

**ಪ್ರಶ್ನೆ :– ದೈವಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅದನ್ನು ಅನುಸರಿಸಿದರೇ ಜ್ಞಾನಾಗ್ನಿಯಲ್ಲಿ ಕರ್ಮಗಳು (ಪಾಪಗಳು) ಸುಟ್ಟುಹೋಗುತ್ತ ವೆಂದು ಹೇಳಿದ್ದೀರಲ್ಲವೆ! ಅದೇ ವಿಷಯ ನಿಮ್ಮ ಜ್ಞಾನದ ಹತ್ತಿರ ಪ್ರತ್ಯಕ್ಷವಾಗಿ ಕಾಣಿಸುತ್ತಿದೆಯೆಂದು ಹೇಳಿದ್ದೀರಲ್ಲವೆ! ನಾವು ಸಕ್ರಮವಾದ ಜ್ಞಾನವನ್ನು ಅನುಸರಿಸಿದರೇ ನಮಗೆ ಅಂತಹ ಶಕ್ತಿ ಬರುತ್ತದಾ? ನಮ್ಮಲ್ಲಿನ ಕರ್ಮಗಳು ಸುಟ್ಟುಹೋಗುತ್ತವಾ? ಹೀಗೆ ನಡೆಯುತ್ತದೆಂದು ನಮ್ಮ ಖುರಾನ್ ಗ್ರಂಥ ದಲ್ಲಾಗಲೀ, ನಮ್ಮ ಬೈಬಲ್‌ನಲ್ಲಾಗಲೀ ಹೇಳಲಿಲ್ಲವೆಂದು ಮುಸ್ಲಿಮ್‌ರು, ಕ್ರೈಸ್ತರು ಕೇಳಬಹುದು. ಅದಕ್ಕೆ ನೀವು ಏನು ಉತ್ತರ ಕೊಡುತ್ತೀರಾ?**

**ಉತ್ತರ :–** ಒಳ್ಳೆಯ ಪ್ರಶ್ನೆಯನ್ನೇ ಕೇಳಿದ್ದೀರ, ಅದಕ್ಕೆ ಒಳ್ಳೆಯ ಉತ್ತರವೇ ಇದೆ ನೋಡಿರಿ. ಖುರಾನ್ ಗ್ರಂಥದಲ್ಲಿ ದೇವರು ನಿಮ್ಮ ಕರ್ಮಗಳನ್ನು ಕ್ಷಮಿಸುವವನು ಎಂದು ಅನೇಕ ಸಂದರ್ಭಗಳಲ್ಲಿ ಹೇಳಿದ್ದಾನೆ. ಅಷ್ಟೇ ಅಲ್ಲದೇ ಖುರಾನ್‌ನಲ್ಲಿ ಪ್ರತಿ ಸೂರಾ ಪ್ರಾರಂಭದಲ್ಲಿಯೂ ಎಲ್ಲರಿಗೂ ಜ್ಞಾಪಕವಿರುವಹಾಗೆ **"ಅಪಾರ ಕರುಣಾಮಯನು, ಪರಮ ಕೃಪಾಶೀಲನಾದ ಅಲ್ಲಾಹ್ ಹೆಸರಿನಿಂದ ಪ್ರಾರಂಭ"** ಎಂದೂ, ಅನಂತ ಕರುಣಾಮಯನು, ಅಪಾರ ಕ್ಷಮಾಶೀಲನಾದ ಅಲ್ಲಾಹ್ ಹೆಸರಿನಿಂದ ಪ್ರಾರಂಭವೆಂದು ಹೇಳುವುದು ಪ್ರತಿ ಖುರಾನ್ ಗ್ರಂಥದಲ್ಲಿ ನಡೆದಿರುತ್ತದೆ. ಇದನ್ನನುಸರಿಸಿ ದೇವರನ್ನು ನಾವು ಬೇಡಿಕೊಂಡರೇ ಆತನು ನಮ್ಮ ಪಾಪಗಳನ್ನು ಕ್ಷಮಿಸಬಲ್ಲನೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಖುರಾನ್ ಗ್ರಂಥದಲ್ಲಿ 39ನೇ ಸೂರಾದಲ್ಲಿ 53ನೇ ಆಯತ್‌ನಲ್ಲಿ ಸಹ ಪಾಪಕ್ಷಮಾಪಣೆ ವಿಷಯವನ್ನು ಕುರಿತು ಹೇಳಿದ್ದಾನೆ. **(39–53) "ತಮ್ಮ ಆತ್ಮಗಳ ಮೇಲೆ ಅನ್ಯಾಯಕ್ಕೆ ಪಾಲ್ಪಟ್ಟ ಓ ನನ್ನ ದಾಸಿಗಳೇ! ನೀವು ಅಲ್ಲಾಹ್ ಕಾರುಣ್ಯದ ಕಡೆ ನಿರಾಶೆ ಪಡಬೇಡಿ. ನಿಶ್ಚಯವಾಗಿ ಅಲ್ಲಾಹ್ ಪಾಪಗಳೆಲ್ಲವನ್ನೂ ಕ್ಷಮಿಸುತ್ತಾನೆ. ನಿಜವಾಗಿ ಆತನು**

**ಅಮಿತವಾಗಿ ಕ್ಷಮಿಸುವವನು, ಅಪಾರವಾಗಿ ಕರುಣಿಸುವವನು"** ಇದೇ ವಿಧವಾಗಿ ಅನೇಕ ಆಯತ್‌ಗಳಲ್ಲಿ ದೇವರು ಕರುಣಾಮಯನು, ಕ್ಷಮಾಶೀಲನು ಎಂದು ಅನೇಕ ಸಂದರ್ಭಗಳಲ್ಲಿ ಹೇಳಿದ್ದಾನೆ.

ಇದನ್ನನುಸರಿಸಿ ಭೂಮಿ ಮೇಲೆ ಇರುವ ಮುಸ್ಲಿಮ್‌ರೆಲ್ಲರೂ ನನ್ನ ಜ್ಞಾನವನ್ನು ಅನುಸರಿಸುವವರ ಪಾಪಗಳನ್ನು ನಾನು ಇಲ್ಲದಂತೆ ಮಾಡುತ್ತೇನೆಂದು, ಕ್ಷಮಿಸುತ್ತೇನೆಂದು, ದೇವರು ಹಾಮೀ ಕೊಟ್ಟಿದ್ದಾನೆಂದು ತಿಳಿಯುತ್ತಿದೆ. ದೇವರ ಜ್ಞಾನವನ್ನು ತಿಳಿದು ಆಚರಿಸುವುದಾದರೇ ಎಂತಹ ಪಾಪಾತ್ಮರಾದರಾಗಲೀ ದೇವರಿಂದ ಕ್ಷಮಿಸಲಾಗುತ್ತಾನೆಂದು, ಅಂತಹವನಿಗೆ ದೇವರ ಜ್ಞಾನ ಪಾಪಗಳನ್ನು ಸುಟ್ಟುಹಾಕುವುದೆಂದು ತಿಳಿಯುತ್ತಿದೆ. ಈ ಮಾತು ದೇವರು ಹೇಳಿರುವುದಾದ್ದರಿಂದ ಸರ್ವಮನುಷ್ಯರಿಗೂ ಅನ್ವಯಿಸುತ್ತದೆ. ಮುಸ್ಲಿಮ್‌ರಿಗೆ ಮಾತ್ರ ಎಂದು ಅಂದುಕೊಳ್ಳಬಾರದು. ದೇವರ ಜ್ಞಾನ ಸಮಸ್ತ ಮನುಷ್ಯರಿಗೂ ಅನ್ವಯಿಸುತ್ತದೆ. ಪ್ರಜೆಗಳಿಗೆ ಜ್ಞಾಪಕ ಮಾಡುವ ನಿಮಿತ್ತ ಮೂರು ಗ್ರಂಥಗಳಲ್ಲಿಯೂ ಪಾಪ ಕ್ಷಮಾಪಣೆ ವಿಷಯ ಹೇಳಬೇಕಾಗಿದೆ ಆದರೆ, ಬೇರೆಬೇರೆ ಮತಗಳಲ್ಲಿ ಬೇರೆ ಬೇರೆ ಕ್ಷಮಾಪಣೆ ಅಂದುಕೊಳ್ಳಬಾರದು. ಯಾವ ದೈವ ಗ್ರಂಥದಲ್ಲಿನ ಮಾತಾದರೂ ಸಮಸ್ತ ಮನುಷ್ಯರಿಗೂ ಅನ್ವಯಿಸುತ್ತದೆ.

ದ್ವಿತೀಯ ದೈವಗ್ರಂಥದಲ್ಲಿ ಸಹ ಎಂದರೆ ಬೈಬಲ್ ಗ್ರಂಥದಲ್ಲಿ ಸಹ ಪ್ರತ್ಯೇಕಿಸಿ ನಾಲ್ಕು ಸುವಾರ್ತೆಗಳಲ್ಲಿ ದೇವರು ಪಾಪಗಳನ್ನು ಕ್ಷಮಿಸುವನೆಂದು ಹೇಳಿದ್ದಾನೆ. ಅಲ್ಲಿ ಹೇಳಿದ ವಿಷಯವನ್ನು ಸಹ ಕ್ರೈಸ್ತರಾಗಿ ಇರುವವರು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ದೇವರ ವಾಕ್ಯ ಒಂದು ವಿಧವಾದ ಜ್ಞಾನವನ್ನು ಹೇಳಿರುವಾಗ, ಮನುಷ್ಯರು ಆತನ ಮಾತನ್ನು ಅರ್ಥ ಮಾಡಿಕೊಳ್ಳದೇ ಬೇರೆ ವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ. ಮತ್ತಾಯ ಸುವಾರ್ತೆ 26ನೇ ಅಧ್ಯಾಯ ದಲ್ಲಿ 28ನೇ ವಚನ ಈ ರೀತಿ ಇದೆ ನೋಡಿರಿ **(ಮತ್ತಾಯ 26–28) "ಇದು ನನ್ನ ರಕ್ತ ಅನೇಕರು ಪಾಪ ಕ್ಷಮಾಪಣೆ ನಿಮಿತ್ತ ಸುರಿಸಲ್ಪಡುವ ಒಡಂಬಡಿಕೆಯ ರಕ್ತ"** ಎಂದು ಹೇಳಿದ್ದಾನೆ. ಈ ವಾಕ್ಯದಲ್ಲಿ ಇದು ನನ್ನ **"ಒಡಂಬಡಿಕೆಯ ರಕ್ತ"**

ಎಂದು ಯೇಸು ಹೇಳಿದರೇ ಕ್ರೈಸ್ತರು ಯೇಸು ಶರೀರದಲ್ಲಿ ಇರುವ ರಕ್ತವೆಂದು ಅಂದುಕೊಂಡಿದ್ದಾರೆ. ಅನೇಕರಿಗಾಗಿ ಸುರಿಸುವ ಒಡಂಬಡಿಕೆಯ ರಕ್ತ ಎಂದು ಹೇಳಿದರೂ, ಆ ವಾಕ್ಯವನ್ನು ತಪ್ಪು ಮಾರ್ಗದಲ್ಲಿ ಅರ್ಥ ಮಾಡಿಕೊಳ್ಳುವುದು ನಡೆದಿದೆ. ಯಾವ ರೀತಿ ಖುರಾನ್ ಗ್ರಂಥದಲ್ಲಿ (2–187)ನೇ ಆಯತ್‌ನಲ್ಲಿ ರಾತ್ರಿಹೊತ್ತು ತಿನ್ನಿರಿ, ಕುಡಿಯಿರಿ ಹಗಲು ಉಪವಾಸವಿರಿ. ಎಂಬ ವಾಕ್ಯ ಒಟ್ಟು ಆಯತ್‌ನ್ನು ಹೇಗೆ ತಪ್ಪುದಾರಿ ಹಿಡಿಸಿದೆಯೋ ಹಾಗೇ 'ಸುರಿಸಲ್ಪಡುವ' ಎಂಬ ಪದ ಒಟ್ಟು ಕ್ರೈಸ್ತರನ್ನು ತಪ್ಪುದಾರಿ ಹಿಡಿಸಿದೆ. ಇಂದು ಕ್ರೈಸ್ತವರಲ್ಲಿಯೂ ಸಹ ಎಷ್ಟೋ ಮಂದಿ ಮೇಧಾವಿಗಳಿದ್ದಾರೆ. ಆದರೂ ಅವರ ಮೇಧಾಶಕ್ತಿ ಪ್ರಪಂಚ ವಿಷಯಗಳಲ್ಲಿ ಉಪಯೋಗಪಡುತ್ತಿವೆ ಆದರೆ, ದೇವರ ವಾಕ್ಯದ ವಿಷಯದಲ್ಲಿ ಉಪಯೋಗಪಡಲಿಲ್ಲ. "ಸುರಿಸಲ್ಪಡುವ" ಎಂಬ ವರ್ತಮಾನ ಕಾಲದಲ್ಲಿ ವಾಕ್ಯವನ್ನು ಹೇಳಿದರೂ, ಅದನ್ನು ನಡೆದುಹೋದ ಕಾಲದಲ್ಲಿನ ವಾಕ್ಯವಾಗಿ ಅರ್ಥ ಮಾಡಿಕೊಂಡಿದ್ದಾರೆ. ಆ ಮಾತು ಹೇಳಿದಾಗ ಯೇಸು ಸಿಲುಬೆ ಹಾಕಿರಲಿಲ್ಲ. ಆತನ ರಕ್ತ ಸುರಿಸಲೂ ಇಲ್ಲ. ದ್ರಾಕ್ಷಾರಸವನ್ನು ಕೊಟ್ಟು ಇದು ನಿಮಗಾಗಿ ಮೂರು ಸಂವತ್ಸರಗಳಿಂದ ಸುರಿಸುವ ಒಡಂಬಡಿಕೆಯ ರಕ್ತವೆಂದಿದ್ದಾನೆ. ಒಡಂಬಡಿಕೆಯ ರಕ್ತ ಎಂದರೆ ಬಂಧವಿಲ್ಲದ ಜ್ಞಾನವೆಂದಾಗಲೀ, ಮೂರು ಸಂವತ್ಸರಗಳಿಂದ ಪ್ರಜೆಗಳಿಗಾಗಿ ಅದನ್ನು ಪ್ರಜ್ವಲಿಸುವಂತೆ ಮಾಡುತ್ತಿದ್ದಾನೆಂದು ಆ ವಾಕ್ಯದಲ್ಲಿ ಹೇಳಲಾಗಿದೆ. ಅಲ್ಲಿ 'ಒಡಂಬಡಿಕೆ' ಎಂಬ ಪದವನ್ನು ಕ್ರೈಸ್ತರು ಪೂರ್ತಿ ಬಿಟ್ಟು ಹಾಕಿ, ಯೇಸು ರಕ್ತವನ್ನು ಮಾತ್ರ ಹೇಳಿಕೊಳ್ಳುತ್ತಿದ್ದಾರೆ. ಆತನು (ಯೇಸು) ನನ್ನ ಜ್ಞಾನದಿಂದ ನಿಮ್ಮ ಪಾಪಗಳು ಕ್ಷಮಿಸಲಾಗುತ್ತವೆ ಎಂದರೇ, ಆತನ ರಕ್ತದಿಂದಲೇ ಮನುಷ್ಯರ ಪಾಪಗಳು ಹೋಗುತ್ತವೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಈ ರೀತಿ ಪ್ರತಿ ಮತದಲ್ಲಿಯೂ ದೇವರ ವಾಕ್ಯವನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವುದಾಗಿದೆ. ಕ್ರೈಸ್ತರು ಯೇಸು ಹೇಳಿದ ಸೂಕ್ಷ್ಮವಾದ ಜ್ಞಾನವನ್ನು ಸ್ಥೂಲವಾಗಿ ಅರ್ಥ ಮಾಡಿಕೊಂಡಾಗ, ಮುಸ್ಲಿಮ್‌ರು ಸ್ಥೂಲವಾದ ವಾಕ್ಯವನ್ನೇ ಸ್ಥೂಲವಾಗಿ ಸರಿಯಾದ ಭಾವದಲ್ಲಿ ಅರ್ಥ ಮಾಡಿಕೊಳ್ಳಲಾರದೆ ಹೋಗಿದ್ದಾರೆ. ಹಾಗೆ

ತಪ್ಪು ಭಾವಗಳಿಂದ ಅರ್ಥ ಮಾಡಿಕೊಂಡು ದೇವರ ಜ್ಞಾನವನ್ನು ವಕ್ರಮಾರ್ಗದಲ್ಲಿ ಆಚರಿಸಿದರೇ, ಜ್ಞಾನಶಕ್ತಿ ಹೇಗೆ ಬರುತ್ತದೆ? ಕರ್ಮಗಳು ಹೇಗೆ ಸುಟ್ಟು ಹೋಗುತ್ತವೆ?

ದೇವರು ಮನುಷ್ಯರಿಗಾಗಿ ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ತಿಳಿಸಿ ಅದನ್ನೇ ಮೂರು ಗ್ರಂಥಗಳಾಗಿ ತಯಾರು ಮಾಡಿ ಕೊಡುವುದಾಗಿದೆ. ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದ್ದರಿಂದ ಒಂದು ಬಾರಿ ಆಕಾಶವಾಣಿಯಿಂದ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಹಾಗೆ ಹೇಳಿದ ಜ್ಞಾನ **"ಜಪರ"** ಎಂಬ ಹೆಸರಿನಿಂದ ಮೂರು ಯುಗಗಳ ಕಾಲ ಮನುಷ್ಯರ ಮಧ್ಯದಲ್ಲಿ ಮಾತುಗಳ, ಹಾಡುಗಳ ರೂಪದಲ್ಲಿದ್ದರೂ ಕಾಲ ಕಳೆಯುತ್ತಿದ್ದಂತೆ ಅದನ್ನು ಪ್ರಜೆಗಳು ಮರೆತುಹೋಗಿ ತಪ್ಪು ಆಚರಣೆಗಳಾದ ಯಜ್ಞಗಳು ಮಾಡುವುದಕ್ಕೂ, ದಾನಗಳು ಮಾಡುವುದಕ್ಕೂ, ವೇದ ಅಭ್ಯಾಸ ಮಾಡುವುದಕ್ಕೂ, ತಪಸ್ಸು ಮಾಡುವುದಕ್ಕೂ ಅಭ್ಯಾಸವಾಗಿದ್ದಾರೆ. ಅಂತಹ ಸಂದರ್ಭದಲ್ಲಿ ದೇವರು ಭಗವಂತನೆಂಬ ಮಾರುವೇಷದಲ್ಲಿ ಬಂದು, ಮೊದಲು ಹೇಳಿದ ಜ್ಞಾನವನ್ನೇ **"ಭಗವದ್ಗೀತಾ"** ರೂಪದಲ್ಲಿ ಭಾರತದೇಶದಲ್ಲಿ ಹೇಳಲಾಗಿದೆ. ನಂತರ ಮೂರು ಸಾವಿರ ಸಂವತ್ಸರಗಳಿಗೆ ಇಸ್ರಾಯೇಲ್ ದೇಶದಲ್ಲಿ ದೇವರೇ ಪುನಃ ಮಾರುವೇಷದಲ್ಲಿ ಬಂದು ತನ್ನ ಜ್ಞಾನವನ್ನು ಹೇಳಲಾಗಿದೆ. ದೇವರು ದೇವರಾಗಿ ಅಲ್ಲದೆ ಮನುಷ್ಯನಹಾಗೆ ಮಾರುವೇಷದಲ್ಲಿ ಬಂದು ಹೇಳುವುದರಿಂದ, ದೇವರು ಮನುಷ್ಯರೊಂದಿಗೆ ಸ್ವತಃವಾಗಿ ಮಾತನಾಡಿದಂತಲ್ಲ. ಈ ರೀತಿ ಒಂದು ವಾಣಿ, ಎರಡು ದೂತನಹಾಗೆ ಹೇಳಿರುವಾಗ ಕೊನೆಯ ಮೂರನೆಯ ವಿಧಾನದಿಂದ ತೆರೆಹಿಂದಿನಿಂದ ಜಿಬ್ರಯೇಲ್ ತನ್ನ ಜ್ಞಾನವನ್ನು ಹೇಳಿಸುವುದು ನಡೆದಿದೆ. ನಂತರ ಯಾವಾಗ ಜ್ಞಾನವನ್ನು ಹೇಳಿದರೂ, ಈ ಮೂರು ವಿಧಾನಗಳಿಂದಲೇ ಹೇಳಬೇಕು. ಮೂರು ಪದ್ಧತಿಗಳಿಂದಲೇ ತನ್ನ ಜ್ಞಾನವನ್ನು ತಿಳಿಸುತ್ತೇನೆಂದು **"ಅಂತಿಮ ದೈವಗ್ರಂಥ"** ದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೇಳಿದ್ದಾನೆ.

ಈ ರೀತಿ ದೇವರು ಸೃಷ್ಠಿ ಆದಿಯಿಂದ ಕಲಿಯುಗದವರೆಗೂ ಒಂದು ಬಾರಿ, ಕಲಿಯುಗದಲ್ಲಿ 5000 ವರ್ಷಗಳ ಕೆಳಗೆ ಒಂದು ಬಾರಿ, 2000 ಸಂವತ್ಸರಗಳ ಕೆಳಗೆ ಒಂದು ಬಾರಿ, 1400 ಸಂವತ್ಸರಗಳ ಕೆಳಗೆ ಒಂದು ಬಾರಿ ಜ್ಞಾನವನ್ನು ತಿಳಿಸಿ ಅದನ್ನೇ ಗ್ರಂಥರೂಪದಲ್ಲಿ ಕೊಟ್ಟಿದ್ದಾನೆ. ಕಲಿಯುಗದಲ್ಲಿ ಮೂರು ಬಾರಿ ಹೇಳಿದ ಜ್ಞಾನವನ್ನು ಮೂರು ಗ್ರಂಥಗಳಾಗಿ ಕೊಟ್ಟರೇ, ಮನುಷ್ಯರು ಅದನ್ನು ಸರಿಯಾಗಿ ಗ್ರಹಿಸಲಾರದೆ, ತಮ್ಮನ್ನು ತಾವು ದೊಡ್ಡ ಜ್ಞಾನಿಗಳಾಗಿ ತಿಳಿದು ಮೂರು ಮತಗಳಾಗಿ ಬದಲಾಗಿ, ದೇವರು ಹೇಳಿದ ಒಂದೇ ಜ್ಞಾನವನ್ನು ನಮ್ಮದು ಬೇರೆ, ನಿಮ್ಮದು ಬೇರೆ ಎನ್ನುತ್ತಿದ್ದಾನೆ. ದೇವರ ಉದ್ದೇಶ ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸಬೇಕೆನ್ನುವುದೇ ಆಗುವುದರಿಂದ ತನ್ನ ಮೂರು ಪದ್ಧತಿಗಳಲ್ಲಿ ಯಾವುದೋ ಒಂದು ಪದ್ಧತಿಯನ್ನನುಸರಿಸಿ ಪ್ರಜೆಗಳ ಮಧ್ಯದೊಳಗೆ ಬಂದು, ಕೆಟ್ಟುಹೋದ ತನ್ನ ಜ್ಞಾನವನ್ನು ಸವರಿಸುವುದಕ್ಕೆ ನೀವು ಹೀಗೆ ಇಲ್ಲಿ ತಪ್ಪಾಗಿ ತಿಳಿಯುತ್ತಿದ್ದೀರೆಂದು, ದೇವರು ನೀವು ಅಂದುಕೊಂಡ ಭಾವದಲ್ಲಿ ಹೇಳಲಿಲ್ಲವೆಂದು ತಿಳಿಸಿದರೂ, ನೀವು ಯಾರು ನಮ್ಮ ಜ್ಞಾನವನ್ನು ಹೇಳುವುದಕ್ಕೆ, ನಮ್ಮ ಜ್ಞಾನ ನಮಗೆ ತಿಳಿದಿದೆ ಎಂದು ಮತವನ್ನು ಅಡ್ಡ ಇಟ್ಟುಕೊಂಡು ದೇವರನ್ನೇ ಧಿಕ್ಕರಿಸುವ ಅಜ್ಞಾನ ಸ್ಥಿತಿಗೆ ಮನುಷ್ಯ ಸೇರಿಕೊಂಡಿದ್ದಾನೆ. ಆದರೂ ಛಲವನ್ನು ಬಿಡದ ವಿಕ್ರಮಾರ್ಕನ ಹಾಗೆ ದೇವರು ತನ್ನ ಜ್ಞಾನವನ್ನು ಭೂಮಿ ಮೇಲೆ ತಪ್ಪದೆ ಹೇಳಿಹೋಗುತ್ತಾನೆ. ಅದನ್ನು ಗ್ರಹಿಸಿದವನು ಧನ್ಯನು, ಗ್ರಹಿಸದೇ ಇರುವವನು ದರಿದ್ರನು. ದೇವರ ಮಾತನ್ನೇ ಧಿಕ್ಕರಿಸುವವರಿರುವಾಗ ನಾವು ಹೇಳುವ ಮಾತನ್ನು ಕೇಳುತ್ತೀರೆಂಬ ನಂಬಿಕೆ ಇಲ್ಲ. ಆದರೂ ನನಗೆ ತಿಳಿದ ಜ್ಞಾನವನ್ನೇ ನಾನು ತಿಳಿಸುವುದು ನನ್ನ ಕರ್ತವ್ಯ, ನನ್ನ ಧರ್ಮ.

ಇಂದಿನ ಕಾಲದಲ್ಲಿ 31–07–2015ನೇ ದಿನಾಂಕ ದೇವರ ಚಿಹ್ನೆಯನ್ನು ಕುರಿತು ನಮ್ಮ ಉಪನ್ಯಾಸ ಎರಡು ಗಂಟೆಗಳ ಕಾಲ ಮುಂದುವರೆಯಿತು. ಅದನ್ನು ಕೇಳಿದವರು ಹೊರಗೆ ಹೇಳಿಕೊಂಡಾಗ, ಒಬ್ಬ ಮುಸ್ಲಿಮ್ ನಮ್ಮನ್ನು "ಫೇಸ್‌ಬುಕ್"ನಲ್ಲಿ ವಿಮರ್ಶಿಸುವುದು ನಡೆದಿದೆ. ಆತನ ವಿಮರ್ಶೆಯನ್ನು ನಮ್ಮ ಉತ್ತರವನ್ನು ಕೆಳಗೆ ಬರೆಯುತ್ತಿದ್ದೇವೆ ನೋಡಿ.

(ಸಂದೇಹ)ಖಾದಿರ್ :– ('ಫೇಸ್‌ಬುಕ್' ನಿಂದ ಕಳುಹಿಸಿದ ಮೆಸೇಜ್ ಇದು) ತ್ರೈತ ಸಿದ್ಧಾಂತ ಪ್ರಚಾರಕರು ದೇವರ ಚಿಹ್ನೆಯನ್ನು ಖುರ್‌ಆನ್ ಬೆಳಕಿನಲ್ಲಿ ನಿರೂಪಿಸುವ ಸಾಹಸವನ್ನು ಮಾಡಿ ದೊಡ್ಡ ತಪ್ಪು ಮಾಡಿದ್ದೀರ. 22ನೇ ಸೂರಾ 31ನೇ ವಾಕ್ಯ ಹೀಗೆ ಇದೆ. "ಏಕಾಗ್ರತೆಯಿಂದ ಅಲ್ಲಾಹ್ ಏಕತ್ವವನ್ನು ಅನುಸರಿಸುತ್ತಾ ಆತನಿಗೆ ಸಾಟಿ ಕಲ್ಪಿಸದಂತೆ ಇರಬೇಕು ಕೇಳಿ! ಅಲ್ಲಾಹ್‌ಗೆ ಸಾಟಿ ಕಲ್ಪಸುವವನು ಆಕಾಶದಿಂದ ಕೆಳಗೆ ಬಿದ್ದು ಹೋದವನೊಂದಿಗೆ ಸಮಾನ. ಈಗಾತನನ್ನು ಪಕ್ಷಿಗಳಾದರೂ ಹೊಡೆದುಕೊಂಡು ಹೋಗುತ್ತವೆ ಇಲ್ಲವೆ ಬಿರುಗಾಳಿಯಾದರೂ ಎತ್ತಿ ದೂರ ಪ್ರದೇಶದಲ್ಲಿ ಬಿಸಾಕುತ್ತದೆ." 32ನೇ ವಾಕ್ಯ ಹೀಗೆ ಇದೆ.

"ಇದು (ಅಲ್ಲಾಹ್ ಏಕತ್ವವನ್ನು ಅನುಸರಿಸುವುದೇ ಸತ್ಯ ಆದಾಗ) ಅಲ್ಲಾಹ್ ಚಿಹ್ನೆಗಳನ್ನು ಯಾರಾದರೂ ಗೌರವಿಸುತ್ತಿದ್ದಾರೆಂದರೇ ಅದು ಅವರ ಹೃದಯಗಳಲ್ಲಿನ ಭಕ್ತಿ ಭಾವನೆಯಿಂದಲೇ."

ಗಮನಿಕೆ :– ದೇವರ ಚಿಹ್ನೆಗಳು ಎಂದರೇ ಅಲ್ಲಾಹ್ ವಿಧೇಯತೆಯನ್ನು, ವಿಶಿಷ್ಟತೆಯನ್ನು ಸಾರಿ ಹೇಳುವ ಆದೇಶಗಳು ಎಂಬ ಮಾತು. ಇದು ಸೂರತುಲ್ ಹಜ್. ಇದರಲ್ಲಿ ಹಜ್‌ಗೆ ಸಂಬಂಧಿಸಿದ ಆದೇಶಗಳು ಕೊಡುವುದು ನಡೆದಿದೆ. ಹಜ್ ಆದೇಶಗಳಲ್ಲಿ ಕಾಬತುಲ್ಲಾಹ್ ತವಾಫ್ ಇದೆ, ಸಫಾ–ಮರ್ವಾಗಳ ಮಧ್ಯದಲ್ಲಿ ಸಯೀ ಇದೆ. ಖುರ್ಬಾನೀ ಇದೆ. ಆದ್ದರಿಂದ ಕಾಬತುಲ್ಲಾಹ್, ಸಫಾ–ಮರ್ವಾ ಪರ್ವತಗಳು, ಖುರ್ಬಾನೀ ಪಶುಗಳು ಇವೆಲ್ಲಾ ದೈವಚಿಹ್ನೆಗಳಾಗಿ ಖರಾರು ಮಾಡಲಾಗಿವೆ. ಇವುಗಳನ್ನು ಗೌರವಿಸಬೇಕು.

ತ್ರೈತ ಸಿದ್ಧಾಂತ ಪ್ರಚಾರಕರ ಮಾನಸಿಕ ಸ್ಥಿತಿ ಏನೋ 22–31 ವಾಕ್ಯದಲ್ಲಿ ಇದೆ. ಆ ಸ್ಥಿತಿ ಪ್ರಭಾವವೇ ಅವರು ದೇವರು ಒಬ್ಬನೇ ಎನ್ನುತ್ತಾರೆ. ದೇವರು ಅವತರಿಸುತ್ತಾನೆ ಎನ್ನುತ್ತಾರೆ. ಆ ದೇವರೇ ಶ್ರೀ ಕೃಷ್ಣನು ಎನ್ನುತ್ತಾರೆ. ದೈವಪ್ರವಕ್ತ ಮೂಸಾಯೇ ಶ್ರೀಕೃಷ್ಣನು ಎನ್ನುತ್ತಾರೆ 'ಭಗವದ್ಗೀತೆ' ಓದೆನ್ನುತ್ತಾ, 'ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಜ್ಞಾನವಾಕ್ಯಗಳು' ಓದೆನ್ನುತ್ತಾರೆ. ಅವರ ಹಣೆಯಮೇಲೆ

**ಇರುವ ನಾಮವನ್ನು ದೈವಚಿಹ್ನಂ ಎನ್ನುತ್ತಾರೆ. ವಿಗ್ರಹ ಬೇರೆ, ಪ್ರತಿಮ ಬೇರೆ ಎನ್ನುತ್ತಾರೆ. ಇವರ ವಿಭಿನ್ನ ನಂಬಿಕೆಗಳನ್ನು ಹೇತುಬದ್ಧವಾಗಿ ಖಂಡಿಸುವವರಿಗೆ ಹುಚ್ಚು ಹಿಡಿದಿದೆ ಎನ್ನುತ್ತಾರೆ. ಉಧೃತವಾದ ಗಾಳಿಗಳು ನೆಲದಮೇಲೆ ವಸ್ತುಗಳನ್ನು ಅಲ್ಲಿ ಇಲ್ಲಿ ಎಗರಿಸಿಕೊಂಡು ಹೋಗುತ್ತವೋ, ಅದೇ ರೀತಿ ಇವರು ನಿಜ ಆರಾಧ್ಯ ದೈವವನ್ನು ಬಿಟ್ಟು ಶ್ರೀಕೃಷ್ಣನೇ ದೇವರು ಎಂದು ನಿರೂಪಿಸುವ ನಿರಾಧಾರವಾದ ಕೃಷಿಯಲ್ಲಿ ಅಯೋಮಯಕ್ಕೆ ಗುರಿಯಾಗಿದ್ದಾರೆ. ಧಾರ್ಮಿಕ ಜ್ಞಾನವಿಲ್ಲದವರನ್ನು ಮಾರ್ಗಭ್ರಷ್ಟತ್ವಕ್ಕೆ ಗುರಿ ಮಾಡುತ್ತಿದ್ದಾರೆ. 22–31 ವಾಕ್ಯ ಬೆಳಕಿನಲ್ಲಿ ಇವರ ಮಾನಸಿಕ ಸ್ಥಿತಿ ಮೇಲೆ ಕರುಣೆಯಾಗುತ್ತಿದೆ. ಅಲ್ಲಾಹ್ ಇವರಿಗೆ ಸತ್ಯವನ್ನು ಅವಗಾಹನೆ ಮಾಡಿಕೊಳ್ಳುವ ಸದ್ಬುದ್ಧಿಯನ್ನು ಪ್ರಸಾದಿಸಬೇಕೆಂದು ನಾವು ಮನಸಾರಾ ಪ್ರಾರ್ಥನೆ ಮಾಡೋಣ,** ಎಂದು ಬರೆದಿದ್ದಾರೆ. ಅದಕ್ಕೆ ನಮ್ಮ ಉತ್ತರವನ್ನು ನೋಡಿರಿ.

**ಸಂದೇಹ ನಿವಾರಣ :–** ದೈವಗ್ರಂಥದಲ್ಲಿನ ದೈವವಾಕ್ಕನ್ನು ಎಲ್ಲಾದರೇ ಪ್ರಜೆಗಳು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲವೋ, ಅಲ್ಲಿ ಸರಿಯಾದ ಅವಗಾಹನೆ ಕಲ್ಪಿಸಿ ದೇವರ ವಾಕ್ಯವನ್ನು ಅನುಸರಿಸಬೇಕೆಂಬ ಉದ್ದೇಶದಿಂದ ನಾವು ಕೆಲವು ವಾಕ್ಯಗಳಿಗೆ ವಿವರಣೆ ಕೊಡುವುದು ನಡೆದಿದೆ. ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರಿದ್ದಾನೆ. ಬೇರೆ ಎರಡನೆಯ ದೇವರಂತೂ ಯಾರೂ ಇಲ್ಲ. ಮನೆಗೆ ಯಜಮಾನಿ ಒಬ್ಬನೇ, ಸರ್ವಸೃಷ್ಠಿಗೂ ಅಧಿಪತಿ, ಅಧಿಕಾರಿ ಆದ ದೇವರು ಒಬ್ಬನೇ. ಈ ವಿಧಾನವನ್ನೇ ನಾವು ಬೋಧಿಸುತ್ತಿದ್ದೇವೆ ಹೊರತು ಬೇರೆ ದೇವರಿದ್ದಾನೆಂದು ನಾವು ಎಲ್ಲೂ ಹೇಳಲಿಲ್ಲ. ಭೂಮಿ ಮೇಲೆ ಮನುಷ್ಯರು ತಮ್ಮ ಅಜ್ಞಾನದಿಂದ ಕೆಲವು ಸಮಾಜಗಳಾಗಿ ಬಿಡಿಯಾಗಿ ಹೋಗಿದ್ದಾರೆ. ಪ್ರಜೆಗಳು ಎಷ್ಟು ಸಮಾಜಗಳಾಗಿ ಇದ್ದರೂ ಎಲ್ಲರಿಗೂ ದೇವರು ಒಬ್ಬನೇ. ಆದರೇ ಕೆಲವು ಸಮಾಜಗಳು ಆ ಮಾತನ್ನು ಒಪ್ಪಿಕೊಳ್ಳುತ್ತಿವೆ. ಕೆಲವು ಸಮಾಜಗಳು ಒಪ್ಪಿಕೊಳ್ಳದೆ ಅವರ ಅಜ್ಞಾನದಿಂದ ದೇವರನ್ನು ಅನೇಕ ರೂಪಗಳಾಗಿ, ಹೆಸರುಗಳಾಗಿ ಹೇಳಿಕೊಳ್ಳುತ್ತಿದ್ದಾರೆ. 'ದೇವರು ಒಬ್ಬನೇ' ಎನ್ನುವವರಿಗೆ ನಮ್ಮ ಬೋಧೆಗಳೊಂದಿಗೆ ಕೆಲಸವಿಲ್ಲ. ಏಕೆಂದರೆ ಅವರು ಸತ್ಯವನ್ನು ತಿಳಿದಿರುವುದರಿಂದ

ಅವರಿಗೆ ನಾವು ಹೇಳಬೇಕಾದ ಅವಶ್ಯವಿಲ್ಲ. ಭೂಮಿ ಮೇಲೆ ದೇವರು ಒಬ್ಬನೇ ಅಲ್ಲ ಎನ್ನುವವರಿಗೆ ದೇವರು ಒಬ್ಬನೇ ಎಂದು ಹೇಳುತ್ತಾ, ಆ ದೇವರು ಹೇಳಿದ ದೈವವಾಕ್ಯಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದವಿರಗೆ ದೇವರ ಜ್ಞಾನ ಔನ್ನತ್ಯವನ್ನು ತಿಳಿಸುವ ನಿಮಿತ್ತ ನಾವು "ಭಗವದ್ಗೀತೆಯನ್ನು" ವಿವರಿಸಿದ್ದೇವೆ. ನಾವು ಹೇಳಿದ ವಿವರವನ್ನು ಅರ್ಥ ಮಾಡಿಕೊಳ್ಳಲಾರದ ಹಿಂದೂಗಳು ನಮ್ಮನ್ನು ಹಿಂದುವೇ ಅಲ್ಲ, ಹಿಂದುವಾಗಿಯೇ ಇದ್ದು ಭಗವದ್ಗೀತೆ ಮುಸುಗಿನಲ್ಲಿ ಇತರ ಮತಗಳನ್ನು ಪ್ರಚಾರ ಮಾಡುತ್ತಿದ್ದಾರೆಂದು ಆರೋಪಣೆ ಮಾಡಿದ್ದಾರೆ. ಹಿಂದೂಗಳಿಂದ ಬಹಳ ವಿರುದ್ಧತೆ ಬಂದಿದೆ. ಅಲ್ಲಿ ಗೀತೆಯಲ್ಲಿ ದೇವರ ಏಕತ್ವವನ್ನು ಅದಕ್ಕೆ ಸಂಬಂಧಿಸಿದ ಜ್ಞಾನವನ್ನೇ ಹೇಳಿದ್ದೇವೆ. ಅದರಲ್ಲಿ ನಾವು ದೇವರ ಆಜ್ಞೆಯ ಪ್ರಕಾರವೇ ನಡೆದುಕೊಂಡಿದ್ದೇವೆ, ದೇವರು ತಿಳಿಸಿದ ಜ್ಞಾನವನ್ನೇ ತಿಳಿಸಿದ್ದೇವೆ. ನಾವು ಹೇಳಿದ ಜ್ಞಾನದಲ್ಲಿ ಹೇತುಬದ್ಧತೆ ಇದೆ, ಅದಕ್ಕೆ ಸರಿಯಾದ ಶಾಸ್ತ್ರಬದ್ಧತೆ ಇದೆ.

ಸ್ವಲ್ಪ ಕಾಲಕ್ಕೆ ಹಿಂದೂಮತದಲ್ಲಿನ ಕೆಲವರು ಜ್ಞಾನಿಗಳು ನಾವು ಬರೆದ ಭಗವದ್ಗೀತೆಯನ್ನು ಓದಿ, ಅದರಲ್ಲಿನ ಜ್ಞಾನ ವಿವರವನ್ನು ನೋಡಿ ಸಂತೋಷಪಟ್ಟವರಾಗಿ, ಅವರೆಲ್ಲಾ ನಮ್ಮ ಹತ್ತಿರಕ್ಕೆ ಬಂದು "ಇಂದೂ ಜ್ಞಾನವೇದಿಕೆ" ಎಂಬ ಒಂದು ಸಂಘವನ್ನು ತಯಾರು ಮಾಡಿಕೊಂಡು, ನಾವು ಹೇಳಿದ ಜ್ಞಾನವನ್ನೇ ಉತ್ತಮವಾದದ್ದಾಗಿ ಪ್ರಚಾರ ಮಾಡುತ್ತಿದ್ದಾರೆ. ನಾನು ಮುಖ್ಯವಾಗಿ ಹೇಳುವುದೇನೆಂದರೇ! ನಾನು ಹುಟ್ಟುವಿಕೆಯಲ್ಲಿ ಹಿಂದೂವಾಗಿ ಹುಟ್ಟಿದರೂ, ನನಗೆ ಮತ ಮುಖ್ಯವಲ್ಲ, ದೇವರ ಜ್ಞಾನವೇ ಮುಖ್ಯ. ಎಷ್ಟೋ ಜನರು ದೇವರಿಗಾಗಿ, ದೇವರ ಜ್ಞಾನಕ್ಕಾಗಿ ತಪಿಸುವವರು ಎಲ್ಲ ಮತಗಳಲ್ಲಿ ಇದ್ದಾರೆ. ಅವರಿಗೆ ದೇವರು ತಿಳಿಸಿದ ಜ್ಞಾನ ತಿಳಿಯದಂತಿದೆಯೆಂದು, ಅಂತಹವರಿಗೆ ದೇವರ ಜ್ಞಾನ ಎಂದರೆ ಏನೋ ತಿಳಿಸಬೇಕೆಂದು, ನಾವು ಖುರಾನ್ ಗ್ರಂಥದಲ್ಲಿನ ಕೆಲವು ವಾಕ್ಯಗಳಿಗೆ ವಿವರವನ್ನು ಬರೆಯುವುದು ನಡೆದಿದೆ. ಇಸ್ಲಾಮ್ ಸಮಾಜದಲ್ಲಿ 'ದೇವರು ಒಬ್ಬನೇ' ಎಂಬ ಪ್ರಗಾಢ ವಿಶ್ವಾಸ

ಎಲ್ಲರಿಗೂ ಇದೆ. ದೇವರ ಏಕತ್ವದ ಮೇಲೆ ವಿಶ್ವಾಸವಿರುವವರಲ್ಲಿ ಮುಸ್ಲಿಮ್‌ರು ಮೊದಲನೆಯವರು. 'ದೇವರು ಒಬ್ಬನೇ' ಎಂದು ಅವರಿಗೆ ಹೇಳಬೇಕಾದ ಅವಶ್ಯವಿಲ್ಲ. ಅದರೇ ಆ ಒಂದು ಮಾತೇ ಜನರಿಗೆ ಅವಶ್ಯವಾದರೇ, ಅಲ್ಲಾ ಅಷ್ಟು ದೊಡ್ಡ ಖುರಾನ್ ಗ್ರಂಥವನ್ನು ಹೇಳಬೇಕಾದ ಅವಶ್ಯವೇ ಇಲ್ಲ. ಆದರೇ ಖುರಾನ್ ಗ್ರಂಥದಲ್ಲಿನ ವಾಕ್ಯಗಳು ಕೆಲವು ಮಂದಿ ಮತ ಹಿರಿಯರಾದವರಿಗೆ ಹೊರತು ಉಳಿದವರಿಗೆ ತಿಳಿಯದು. ದೇವರ ವಾಕ್ಯಗಳು ಮುಸ್ಲಿಮ್‌ರಲ್ಲಿ ಕೆಲವರಿಗೆ ತಿಳಿಸಬೇಕೆಂಬ ಉದ್ದೇಶದಿಂದಲ್ಲದೆ, ಉಳಿದ ಹಿಂದೂಗಳು, ಕ್ರೈಸ್ತರೂ ಸಹ ಅಂತಿಮ ದೈವ ಗ್ರಂಥವಾದ ಖುರಾನ್‌ನಲ್ಲಿನ ಜ್ಞಾನವೊಂದರ ರುಚಿ ತಿಳಿಯಬೇಕೆಂಬ ಉದ್ದೇಶದಿಂದ, ನಾವು **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಂಥವನ್ನು ಬರೆದಾಗ ಅದನ್ನು ಕೆಲವರು ಮುಸ್ಲಿಮ್‌ರು ನೋಡಿ ಸಂತೋಷಪಟ್ಟು ಅವರ ಸಂಘದಿಂದ ಪ್ರಚುರಣೆ ಮಾಡಿದ್ದಾರೆ. **"ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ"**ಯಿಂದ ಆ ಗ್ರಂಥವನ್ನು ಪ್ರಚುರಿಸಿದ್ದಾರೆ. ಆ ಸಂಘದ ಕೋರಿಕೆ ಮೇರೆಗೆ ನಾವು ಇನ್ನೂ ಕೆಲವು ಗ್ರಂಥಗಳನ್ನು ಬರೆದು ಕೊಡುವುದು ನಡೆದಿದೆ. ಆದರೆ ಮುಸ್ಲಿಮ್ ಹಿರಿಯರು ಎಲ್ಲ ವಿಧಗಳಲ್ಲಿ ನಮ್ಮ ಬೊಧೆಗಳು ಚೆನ್ನಾಗಿವೆಯೆಂದೂ, ದೇವರಿಗಾಗಲೀ, ಖುರಾನ್ ಗ್ರಂಥಕ್ಕಾಗಲೀ, ಎಲ್ಲಿಯೂ ವಿರುದ್ಧವಾಗಿ ಇಲ್ಲವೆಂದು ಹೇಳುತ್ತಿರುವಾಗ, ಕೆಲವರು ನಮ್ಮ ಗ್ರಂಥದಲ್ಲಿನ ಜ್ಞಾನವನ್ನು ಅರ್ಥ ಮಾಡಿಕೊಳ್ಳದೇ ಮುಂದೆ ದೃಷ್ಟಿ ಇಲ್ಲದಂತೆ, ಅವರ ನೋಟದ ಪರಿಧಿಯಲ್ಲಿ ನಮ್ಮ ರಚನೆಗಳನ್ನು ತಪ್ಪು ಹಿಡಿಯುತ್ತಿದ್ದಾರೆ. ನಾವು ಹೇಳುವುದನ್ನು ತಾಳ್ಮೆಯಿಂದ ಓದುವುದಾದರೇ ಅವರೂ ಸಹ ಖಂಡಿತ ಒಪ್ಪಿಕೊಳ್ಳುತ್ತಾರೆ. **ನಾವು ಹೇಳುವುದು ಇಂದಿಗೂ ನಾಳೆಗೂ ಎಂದಿಗೂ ಸತ್ಯ** ಆದ್ದರಿಂದ ಎಲ್ಲರೂ ಈ ದಾರಿಗೆ ಬರಬೇಕಾಗಿದ್ದೇ, ಖಂಡಿತ ಬರುತ್ತೀರೆಂದು ಆಶಿಸೋಣ.

ನಾನು ಒಬ್ಬ ಮತ ಗುರುವು ಅಲ್ಲ. ನಾನು ದೇವರ ವಾಕ್ಯವನ್ನು ವಿವರಿಸಿ ಕೇಳಿಸುವುದಕ್ಕೆ ಬಂದಿರುವವನು ಮಾತ್ರವೇ. ಎಲ್ಲರೂ ನನ್ನ ಮಾತನ್ನೇ

ಕೇಳಬೇಕೆಂದು ಹೇಳಲಿಲ್ಲ. ದೇವರು ನಿಮ್ಮನ್ನು ಯಾವಕಡೆ ನಡೆಸಿದರೇ ಆಕಡೆ ಹೋಗಬಲ್ಲಿರಿ. ನನ್ನ ಬೋಧನೆಗಳನ್ನು ಕೇಳಿದ ಕ್ರೈಸ್ತರು ನನ್ನ ಹತ್ತಿರಕ್ಕೆ ಬಂದು ಬೈಬಲ್ ಗ್ರಂಥದಲ್ಲಿನ ಕೇವಲ ನಾಲ್ಕು ಸುವಾರ್ತೆಗಳ ಜ್ಞಾನವನ್ನು ಕೇಳಿದ್ದಾರೆ. ನಾವು ಹೇಳಿದ ನಂತರ ಸುವಾರ್ತೆಗಳ ವಾಸ್ತವ ಜ್ಞಾನ ತಿಳಿದಿದೆಯೆಂದು ಸಂತೋಷಪಟ್ಟು ಕ್ರೈಸ್ತರಲ್ಲಿ ಕೆಲವರು **"ಸುವಾರ್ತೆ ಕ್ರೈಸ್ತವ ಸಂಘ"**ವನ್ನು ಸ್ಥಾಪಿಸಿ ಆ ಸಂಘದಿಂದ ನಾವು ಹೇಳಿದ ಜ್ಞಾನವನ್ನು ಗ್ರಂಥರೂಪದಲ್ಲಿ ಪ್ರಚುರಿಸಿ ಪ್ರಚಾರ ಮಾಡಿಕೊಳ್ಳುತ್ತಿದ್ದಾರೆ. ಒಂದು ಬಾರಿ ನಮ್ಮ ಬೋಧನೆಗಳನ್ನು ವಿರೋಧಿಸಿದ ಮೂರು ಮತಗಳವರು ನಂತರ ನಮ್ಮ ಬೋಧನೆಗಳಲ್ಲಿನ ವಾಸ್ತವಿಕ ಸತ್ಯವನ್ನು ಗ್ರಹಿಸಿ, ಇದೇ ಸರಿಯಾದ ಜ್ಞಾನವೆಂದು ಈದಿನ ಪ್ರಚಾರ ಮಾಡುತ್ತಿದ್ದಾರೆ. ದೈವಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿನ ದೇವರ ಜ್ಞಾನಕ್ಕೆ ನಾವು ಎಲ್ಲೂ ವಿರುದ್ಧವಾಗಿ ಹೇಳಲಿಲ್ಲ, ಬರೆಯಲಿಲ್ಲ. ನಮ್ಮ ಬೋಧೆಗಳಲ್ಲಿ ಹೇತುಬದ್ಧತೆ, ಶಾಸ್ತ್ರೀಯತೆ ಎರಡೂ ಇವೆ. ದೇವರ ವಾಕ್ಯಕ್ಕೆ ವಿರುದ್ಧವಾಗಿ ಬರೆದರೂ, ಹೇಳಿದರೂ ದೇವರು, ದೇವದೂತರು ಎಲ್ಲರೂ ಶಪಿಸಬಲ್ಲರು. ಅಷ್ಟೇ ಅಲ್ಲದೆ ಪಾಪಗಳಲ್ಲಿ ದೊಡ್ಡ ಪಾಪ ಬರುತ್ತದೆಂದು ಖುರಾನ್ ಗ್ರಂಥ (2-161) ಆಯತ್‌ನಲ್ಲಿ ದೇವರೇ ಹೇಳಿದ್ದಾನೆ. ದೇವರ ಜ್ಞಾನಕ್ಕೆ ವಿರುದ್ಧವಾಗಿ ಮಾತನಾಡುವವನಿಗೆ ಈ ಯುಗದಲ್ಲಾದರೂ, ಬರುವ ಯುಗದಲ್ಲಾದರೂ ಪಾಪಕ್ಷಮಾಪಣೆ ಇಲ್ಲವೆಂದು ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 12ನೇ ಅಧ್ಯಾಯದಲ್ಲಿ 32ನೇ ವಾಕ್ಯದಲ್ಲಿ ಹೇಳಿದ್ದಾರೆ. ಇನ್ನೂ ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗಯೋಗ ಎಂಬ ಅಧ್ಯಾಯದಲ್ಲಿ 20ನೇ ಶ್ಲೋಕದಲ್ಲಿ ದೇವರ ಜ್ಞಾನಕ್ಕೆ ವಿರೋಧಿಯಾಗಿರುವ ವನನ್ನು, ತಪ್ಪು ಭಾವಗಳು ಹೇಳುವವನನ್ನು ಅಜ್ಞಾನಿಗಳಾಗಿ ಹುಟ್ಟಿಸಿ ಜನ್ಮಜನ್ಮಕ್ಕೂ ಅಧೋಗತಿಪಾಲು ಮಾಡಿ, ನನ್ನ ಜ್ಞಾನವೊಂದರ ಗಟ್ಟು ಸಿಗದಂತೆ ಮಾಡುತ್ತೇನೆಂದು ದೇವರು ಹೇಳಿದ್ದಾನೆ. ಇವೆಲ್ಲಾ ತಿಳಿದ ನಾವು ತಪ್ಪು ಭಾವವಿರುವ ಕಡೆ ಸರಿಮಾಡಿ, ವಿಶದೀಕರಿಸಿ ಹೇಳಿ ಉಳಿದ ಪ್ರಜೆಗಳನ್ನು ಅಜ್ಞಾನ ಮಾರ್ಗದಲ್ಲಿ ಹೋಗದಂತೆ ತಿಳಿಸಿ ಹೇಳಬೇಕೆಂದುಕೊಂಡಿದ್ದೇವೆ.

ಈ ದಿನ ನಾವು ಮೂರು ಗ್ರಂಥಗಳ ಜ್ಞಾನವನ್ನು ಗ್ರಂಥರೂಪದಲ್ಲಿ ಬರೆದಿದ್ದೇವೆ. ಹಾಗೆ ಬರೆಯುವುದರಿಂದ ಯಾವ ಗ್ರಂಥದಲ್ಲಿ ಏನು ಹೇಳಿದ್ದಾರೋ ಪ್ರತಿ ಮತದವರಿಗೂ ತಿಳಿಯುವಂತೆ ಮಾಡಿದ್ದೇವೆ. ನಾವು ಬರೆದ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಖುರಾನ್ ಗ್ರಂಥದಲ್ಲಿನ ಜ್ಞಾನವನ್ನು ಹತ್ತು ಸಾವಿರ ಮಂದಿ ಹಿಂದೂಗಳು ಓದಿದ್ದಾರೆ. ಓದಿದವರು ಖುರಾನ್‌ನಲ್ಲಿ ಇಷ್ಟು ದೊಡ್ಡ ಜ್ಞಾನವಿದೆಯಾ! ಎಂದು ಆಶ್ಚರ್ಯಪಡುತ್ತಿದ್ದಾರೆ ಮತ್ತು ಅದನ್ನು ನೋಡಿ ಸಂತೋಷಪಡುತ್ತಿದ್ದಾರೆ. ಆದರೇ ಕೆಲವರು ದುರದೃಷ್ಟವಶಾತ್ತು ನಮ್ಮ ಜ್ಞಾನವನ್ನು ಪೂರ್ತಿ ನೋಡದಂತೆ, ನಾವು ಏನು ಹೇಳುತ್ತಿದ್ದೇವೋ ಅದನ್ನು ಗ್ರಹಿಸದಂತೆ, ನಮಗೆ ವಿರುದ್ಧವಾಗಿ ನಾವು ಅಜ್ಞಾನವನ್ನು ಬೋಧಿಸಿದಂತೆ ತಿಳಿಯುತ್ತಿದ್ದಾರೆ. ಪ್ರಸ್ತುತ ನಾವು ಅಂತಿಮ ದೈವಗ್ರಂಥದಲ್ಲಿ ಸೂರಾ 22, ಆಯತ್ 32ರಲ್ಲಿ ಇರುವ, ಮತ್ತು ಸೂರಾ 5 ಆಯತ್ 2 ರಲ್ಲಿ ಇರುವ ಸಮಾಚಾರದ ಪ್ರಕಾರ ದೇವರ ಚಿಹ್ನೆಯನ್ನು ಕುರಿತು ಬರೆಯುತ್ತಿದ್ದೇವೆ. ನಾವು ಬರೆದ ವಿವರ ಸೆಪ್ಟೆಂಬರ್ ತಿಂಗಳು 2015ರಲ್ಲಿ ಹೊರಗೆಬರುತ್ತದೆ. ಆದರೆ ನಾವು ಏನನ್ನು ಹೇಳುತ್ತಿದ್ದೇವೋ ನೋಡದೇ, ನಮ್ಮ ಭಾವವನ್ನು ಓದದೇ ನಮ್ಮನ್ನು ವಿಮರ್ಶಿಸುವವರಿರುವುದು ದುರದೃಷ್ಟ. ಆದರೂ ನನ್ನ ಮಾತನ್ನು ನೀವು ಆಚರಿಸಿರೆಂದು ನಾವು ಹೇಳಲಿಲ್ಲ. ದೇವರು ನನಗೆ ತಿಳಿಸಿರುವುದೇ ನಿಮಗೆ ತಿಳಿಸುತ್ತಿದ್ದೇನೆ. ಒಂದು ವೇಳೆ ನಿಮಗೆ ಇಷ್ಟವಾದರೆ ನನ್ನ ಮಾತನ್ನು ಕೇಳಿ, ಇಷ್ಟವಾಗದಿದ್ದರೇ ಗಾಳಿಗೆ ಬಿಟ್ಟು ಬಿಡಿ. ನಾನು ಬರೆಯುವುದು ಮುಸ್ಲಿಮ್ ಸಮಾಜ ತಿಳಿಯಬೇಕೆಂದು ಅಲ್ಲ. ಮುಖ್ಯವಾಗಿ ಖುರಾನ್ ಗ್ರಂಥದಲ್ಲಿ ಏನಿದೆಯೋ, ಕ್ರೈಸ್ತ ಸಮಾಜ, ಹಿಂದೂ ಸಮಾಜ ತಿಳಿಯಬೇಕೆಂದು ಬರೆಯುತ್ತಿದ್ದೇವೆ.

ದೈವವಾಕ್ಕುಗಳನ್ನು ದೇವರ ಗೌರವಕ್ಕೆ ಭಂಗ ಆಗದಂತೆ ಇತರರಿಗೂ ತಿಳಿಸಬೇಕೆನ್ನುವುದೇ ನಮ್ಮ ಉದ್ದೇಶ. ಆದರೂ ನನ್ನನ್ನು ವಿಮರ್ಶಿಸುವವರನ್ನು ನಿಮ್ಮನ್ನು ನೀವು ದೇವರ ಜ್ಞಾನ ವಿಷಯದಲ್ಲಿ ಸಂಪೂರ್ಣವಾಗಿ ತಿಳಿದಂತೆ ಅಂದುಕೊಳ್ಳುತ್ತಿದ್ದೀರ ಅದು ನಿಜವೋ, ಅಲ್ಲವೋ ಹಿಂತಿರುಗಿ ನೋಡಿಕೊಳ್ಳಿ,

ಹಾಗೆ ನೋಡಿಕೊಳ್ಳುವುದರಲ್ಲಿ ತಪ್ಪಿಲ್ಲ ಅಲ್ಲವೆ! ಎಂದು ಕೇಳುತ್ತಿದ್ದೇವೆ. ದೇವರ ಚಿಹ್ನೆಗಳು ನೀವು ಹೇಳಿಕೊಂಡಿರುವವೇಯಾಗಲೀ, ದೇವರು ಅವುಗಳನ್ನು ಕುರಿತು ಎಲ್ಲೂ ಹೇಳಲಿಲ್ಲವೆಂದು ಜ್ಞಾಪಕ ಮಾಡಿಕೊಳ್ಳಿ. ನೀವು ಹೇಳುವವು ನಿಮ್ಮ ಭಕ್ತಿ ಚಿಹ್ನೆಗಳಾ ಅಥವಾ ದೇವರ ಚಿಹ್ನೆಗಳಾ? ಒಂದು ಬಾರಿ ನೋಡಿಕೊಳ್ಳಿ. ನಾವು ಕೃಷ್ಣನನ್ನು ದೇವರೆಂದು ಹೇಳಲಿಲ್ಲ, ಭಗವಂತನೆಂದು ಹೇಳಿದ್ದೇವೆ. ದೇವರಿಗೂ ಭಗವಂತನಿಗೂ ಎಷ್ಟೋ ವ್ಯತ್ಯಾಸ ಇರುವಾಗ ದೇವರೆಂದು ನಾವು ಹೇಗೆ ಹೇಳಬಲ್ಲೆವು. ವಿಗ್ರಹ ಬೇರೆ ಪ್ರತಿಮೆ ಬೇರೆ ಆದರೇ ಇವುಗಳನ್ನು ದೇವರೆಂದು ನಾವು ಹೇಳಲಿಲ್ಲವಲ್ಲವೇ! ದೇವರ ಚಿಹ್ನೆ ಎಂದರೇ ದೇವರಿಗೆ ಸಂಬಂಧಿಸಿರುವುದಾಗಿ ಇರುತ್ತದಾಗಲೀ, ದೇವರಿಗೆ ಅರ್ಪಿಸುವ ಪ್ರಪಂಚ ವಸ್ತುಗಳನ್ನು, ಕೆಲಸಗಳನ್ನು, ಪಶುಗಳನ್ನು ದೇವರ ಚಿಹ್ನೆಗಳಾಗಿ ಹೇಳುವುದು ಸರಿಯೇನಾ? ಅವೆಲ್ಲವೂ ಮನುಷ್ಯವೊಂದರ ಭಕ್ತಿ ಚಿಹ್ನೆಗಳೆಂದು ಹೇಳಬಹುದು. ನನ್ನನ್ನು ವಿಮರ್ಶಿಸುವುದಕ್ಕಿಂತ ಮೊದಲು ನಿಮಗೆ ತಿಳಿದ ಜ್ಞಾನವನ್ನು ದೇವರು ಒಪ್ಪಿಕೊಳ್ಳುತ್ತಾನೆಂದು ನೀವು ಹೇಗೆ ಅಂದುಕೊಳ್ಳುತ್ತಿದ್ದೀರಿ? 2–187 ಆಯತ್‌ನ್ನು ಪೂರ್ತಿ ಓದಿ ನೋಡಿ. ಅಲ್ಲಿ ನೀವು ತಪ್ಪಾಗಿ ಅರ್ಥೈಸಿಕೊಂಡಿದ್ದೀರೋ ಇಲ್ಲವೋ ನೋಡಿಕೊಳ್ಳಿ, ಹಾಗೇ ಸೂರಾ 6–91 ಆಯತ್ ವಾಕ್ಯವೊಂದರ ಪೂರ್ತಿ ವಿವರ ತಿಳಿಯುತ್ತದೇನೋ ನಿಮ್ಮನ್ನು ನೀವು ಪ್ರಶ್ನಿಸಿಕೊಳ್ಳಿ. ನನಗೆ ಹೇಳಬೇಕಾದ ಅವಶ್ಯವಿಲ್ಲ ನೀವು ತಿಳಿದಿದೆಯೆಂದು ತೃಪ್ತಿಹೊಂದಿದರೇ ಸಾಕು. ಹಾಗೇ 6–95, 6–98 ಆಯತ್‌ಗಳಿಗೆ ವಿವರ ತಿಳಿದಿದ್ದರೇ ನಾವೂ ಸಹ ಸಂತೋಷಿಸುತ್ತೇವೆ. ತಿಳಿಯದೆಂದು ನಿಮಗೆ ಅರ್ಥವಾದರೇ ಅದರ ವಾಸ್ತವ ಜ್ಞಾನ ಅಲ್ಲಾಹ್ ಹತ್ತಿರವೇ ಇದೆ ಆದ್ದರಿಂದ ತಿಳಿಸೆಂದು ಅಲ್ಲಾಹ್‌ನನ್ನೇ ಬೇಡಿಕೊಳ್ಳಿ. ತಿಳಿಯದಿರುವಾಗ ನನಗೆ ತಿಳಿದಿದೆ ಎಂದು ಅಂದುಕೊಳ್ಳಬೇಡ, ದೇವರು ಒಪ್ಪಿಕೊಳ್ಳುವುದಿಲ್ಲ.

ಕೊನೆಯದಾಗಿ ನಾವು ಕೇಳುವುದು ಏನೆಂದರೇ! ಸೂರಾ 22–31 ನೇ ವಾಕ್ಯದ ಪ್ರಕಾರ ಆಕಾಶದಿಂದ ಕೆಳಗೆಬಿದ್ದವರನ್ನು ಕುರಿತು ನೀವು ಹೇಳಿದ್ದೀರ. ಅಲ್ಲಾಹ್ ಕೆಳಕ್ಕೆ ತಳ್ಳಿದರೇ ಯಾರಾದರೂ ಕೆಳಗೆ ಬೀಳಬೇಕಾಗಿದ್ದೇ. ಆದರೇ

ಇಲ್ಲಿ ಅಲ್ಲಾ ಹೇಳಿದ ವಾಕ್ಯಗಳಲ್ಲಿ **'ಆಕಾಶ'** ಎಂದರೇ ಏನೋ ನೀವು ಅರ್ಥ ಮಾಡಿಕೊಂಡಿದ್ದೀರಾ? ಎಂದು ಕೇಳುತ್ತಿದ್ದೇವೆ. ಕೆಳಗೆ ಬಿದ್ದವನನ್ನು ಆಕಾಶ ದಲ್ಲಿರುವ ಪಕ್ಷಿಗಳಾಗಲೀ, ಗಾಳಿಯಾಗಲೀ ಹಾರಿಸಿಕೊಂಡು ಹೋಗುತ್ತದೆಂದು ವಾಕ್ಯದಲ್ಲಿ ಇದೆ. ಆಕಾಶದಲ್ಲಿರುವ ಮನುಷ್ಯನನ್ನು ಆಕಾಶದಲ್ಲಿ ನಿವಾಸಿಸುವ ಪಕ್ಷಿಗಳು, ಗಾಳಿ ಮೊದಲೇ ಹೊಡೆದುಕೊಂಡು ಹೋಗದಂತೆ ಕೆಳಗೆ ಬಿದ್ದವನನ್ನೇ ತೆಗೆದುಕೊಂಡು ಹೋಗುವುದಕ್ಕೆ ಕಾರಣ ಏನು? ಆಕಾಶಪಕ್ಷಿಗಳು, ಗಾಳಿ ಎಂದರೇ ವಿವರ ತಿಳಿದಿದೆಯಾ? ಅಲ್ಲಾಹ್ ಸೂಕ್ಷ್ಮವಾಗಿ ಹೇಳಿದ ಜ್ಞಾನವನ್ನು ಸ್ಥೂಲವಾಗಿ ಲೆಕ್ಕಿಸಿಕೊಳ್ಳುವುದೇ ತಪ್ಪು. ಹಾಗಾದರೂ ಸ್ಥೂಲವಾಗಿ ಮನುಷ್ಯರನ್ನು ಪಕ್ಷಿಗಳು ಎತ್ತಿಕೊಂಡು ಹೋಗುವುದು ನಡೆಯುವ ಕೆಲಸವೇನಾ?

ಸೂರಾ 15–29 ನೇ ಆಯತ್‌ನಲ್ಲಿ **"ದೇವರು ಒಬ್ಬ ಮನುಷ್ಯ ಗೊಂಬೆಯನ್ನು ಮಾಡಿ ಅದರಲ್ಲಿ ತನ್ನ ಆತ್ಮನನ್ನೇ ಊದಿದಾಗ ತಯಾರಾದ ಅವನಮುಂದೆ ದೇವದೂತರೆಲ್ಲರೂ ಸಾಷ್ಟಾಂಗ ಮಾಡಿದ್ದಾರೆ, ಮನುಷ್ಯರಾದ ನೀವೂ ಸಹ ಸಾಷ್ಟಾಂಗನಮಸ್ಕಾರ ಮಾಡಿ"** ಎಂದು ಅಲ್ಲಾಯೇ ಜಿಬ್ರಯೇಲ್‌ನಿಂದ ಹೇಳಿದರೇ, ನಾವು ಅಲ್ಲಾಹ್‌ಗೆ ಹೊರತು ಯಾರಿಗೂ ಮುಗಿಯುವುದಿಲ್ಲ ಎನ್ನುವುದು ಅಲ್ಲಾಮಾತನ್ನು ಧಿಕ್ಕರಿಸಿದಂತೆ ಅಲ್ಲವೆ! ಅಲ್ಲಾ ಜ್ಞಾನವನ್ನು ಅನುಸರಿಸಿದಂತಾಗುತ್ತದಾ? ನಾವು ಎಲ್ಲಾದರೂ ಅಲ್ಲಾ ಮಾತನ್ನು ಅಲ್ಲವೆಂದಿದ್ದೇವಾ? ಅಲ್ಲಾ ವಿಷಯದಲ್ಲಿ ತಪ್ಪು ಮಾಡಿದರೇ ನಮ್ಮದಾದರೂ ತಪ್ಪೇಯಾಗುತ್ತದೆ. ದೇವರ ವಿಷಯದಲ್ಲಿ ನಾವು ತಪ್ಪು ಮಾಡಬಾರದೆನ್ನುವ ಭಾವದಲ್ಲಿಯೇ ಇದ್ದೇವೆ. ನಾವು ಎಲ್ಲಾದರೂ ತಪ್ಪು ಮಾಡಿದರೇ ತಪ್ಪದೇ ನಮಗೆ ತಿಳಿಸಿ. ನಾವು ದೇವರಿಗೆ ಭಯಪಡುವವರಾದ್ದರಿಂದ ನಮ್ಮ ತಪ್ಪನ್ನು ನಾವು ಸರಿಮಾಡಿಕೊಳ್ಳುತ್ತೇವೆ.

**ಅಬ್ದುಲ್ ಖಾದಿರ್ ಉಮಾರಿ ಎಂಬ ವ್ಯಕ್ತಿ ಆತನು ಕಳುಹಿಸಿದ ವಿಮರ್ಶೆ ಗಳಿಗೆ ಕೆಲವನ್ನು ನಾವು ಹೀಗೆ ಉತ್ತರಿಸುತ್ತಿದ್ದೇವೆ.** ನಾವು ಸ್ವಲ್ಪದಮಟ್ಟಿಗೆಯಾದರೂ ಉತ್ತರ ಕೊಡದೇ ಹೋದರೇ ನಾವು ತಪ್ಪು ಮಾಡಿದವರಾಗಿ ಹೊರಗೆ ಕಾಣಿಸುವ

ಅವಕಾಶ ಇದೆ. ನಾವು ದೇವರ ಮಾರ್ಗದಲ್ಲಿ ಸಕ್ರಮವಾಗಿ ಇರುವಾಗ ನಮ್ಮನ್ನು ಪ್ರಶ್ನಿಸುವವರು ಎಲ್ಲಿ ತಪ್ಪಾಗಿ ಅರ್ಥೈಸಿಕೊಂಡಿರುವುದು ನಾವು ಹೇಳುವುದು ತಪ್ಪುವುದಿಲ್ಲ.

**ಪ್ರಶ್ನೆ :–** ದಿವ್ಯಖುರ್‌ಆನ್ 1400 ಸಂವತ್ಸರಗಳ ಪೂರ್ವ ವಿಶ್ವಪ್ರಭುವಾದ ಅಲ್ಲಾಹ್ ಕಡೆಯಿಂದ ಅಂತಿಮ ದೈವ ಪ್ರವಕ್ತ ಮುಹಮ್ಮದ್ ಮೇಲೆ ಅವತರಿಸಿದ ಕೊನೆಯ ಗ್ರಂಥ.

**ನಾವು :–** ದಿವ್ಯ ಖುರ್‌ಆನ್ ಗ್ರಂಥ 1400 ಸಂವತ್ಸರಗಳ ಕೆಳಗೆ ಜಿಬ್ರಯೇಲ್ ಆಕಾಶದಿಂದ ಬಂದು ಹೇಳಿದಾಗ ಪ್ರವಕ್ತರವರು 23 ಸಂವತ್ಸರಗಳು ಕೇಳಿದ್ದಾರೆ. 23 ಸಂವತ್ಸರಗಳ ನಂತರ, ಪ್ರವಕ್ತರವರು ಮರಣಿಸಿದ ನಂತರ, ಸ್ವಲ್ಪ ಕಾಲಕ್ಕೆ ಖುರ್‌ಆನ್ ಗ್ರಂಥರೂಪವಾಗಿದೆ. ಖುರ್‌ಆನ್ ದೈವ ಗ್ರಂಥವೇ ಆದರೂ ಯಾವುದೂ ಸ್ವತಃವಾಗಿ ಅವತರಿಸಲಿಲ್ಲ. ಖುರಾನ್ ಹೆಸರಿಗೆ ಅಂತಿಮ ದೈವಗ್ರಂಥವೇ ಆದರೂ ಅದು ತನಗಿಂತ ಮೊದಲು 3600 ಸಂವತ್ಸರಗಳ ಕೆಳಗೆ ಹುಟ್ಟಿದ ಪ್ರಥಮ ದೈವಗ್ರಂಥವಾದ 'ತೌರಾತ್' ಗ್ರಂಥದಲ್ಲಿನ ಜ್ಞಾನವನ್ನೇ ಧೃವೀಕರಿಸಿ ಹೇಳಿದೆ. ಆ ವಿಷಯ ತಿಳಿಯುವುದಕ್ಕೆ ಖುರಾನ್‌ನಲ್ಲಿ (5–43, 5–44, 5–46, 5–48, 5–68, 62–5) ಆಯತ್‌ಗಳನ್ನು ನೋಡಿ.

**ಖಾದಿರ್ :–** ಯೇಸು ಅವರು ಪ್ರಭುವು ಎಂದೂ, ದೇವರ ಕುಮಾರನು ಎಂದೂ, ಪರಿಶುದ್ಧಾತ್ಮ ಎಂದೂ ಪಾಪಿಗಳಿಗಾಗಿ ಸಿಲುಬೆ ಮೇಲೆ ಮರಣಿಸಿದ್ದಾನೆಂದು ನೀವು ನಂಬಿ ನಿಮ್ಮ ಪರಲೋಕ ಜೀವನವನ್ನು ನಾಶ ಮಾಡಿಕೊಳ್ಳಬೇಡಿ.

**ನಾವು :–** ಇದು ಪೂರ್ತಿ ಮತದ್ವೇಷದಿಂದ ಹೇಳುವ ಮಾತಿನಂತೆ ಇದೆ. ಯೇಸನ್ನು ಕುರಿತು ನಿಮಗೆ ತಿಳಿದಿರುವುದು ಅಷ್ಟೇ, ಆತನು ಯಾರೋ, ಎಲ್ಲಿಂದ ಬಂದಿದ್ದಾನೋ, ಎಲ್ಲಿಗೆ ಹೋಗಿದ್ದಾನೋ ಆತನ ಹಿಂದೆಯಿರುವ ರಹಸ್ಯವೇನೋ ನಮಗೆ ಕ್ಷುಣ್ಣವಾಗಿ ತಿಳಿದಿದೆ. ಆದ್ದರಿಂದ ನಿಮ್ಮ ಮಾತನ್ನು ಜ್ಞಾನವಿರುವ ಮಾತಿನಂತೆ ಲೆಕ್ಕಿಸದೇ ಮತದ ಕಡೆಯಿಂದ ಮಾತನಾಡುವ ಮಾತಾಗಿ ಹೇಳುತ್ತಿದ್ದೇವೆ.

**ಖಾದಿರ್ :–** ನಿಮ್ಮ ದೃಷ್ಟಿಯಲ್ಲಿ ಸ್ವರ್ಗನರಕಗಳಿಲ್ಲೇ ಇವೆಯಾ? ನಿಜದೈವವನ್ನು ನಂಬಿ, ಆತನ ಜ್ಞಾನದ ಪ್ರಕಾರ ಜೀವಿಸುವವರು ಚಿಂತೆಗಳಿಲ್ಲದೇ ಜೀವಿಸುತ್ತಿದ್ದಾರೆಂದು ನೀವು ಭಾವಿಸುತ್ತಿದ್ದೀರಾ? ಹಂತಕರು, ಕಾಮಾಂಧರು, ದುರ್ಮಾರ್ಗರು, ಅವಿನೀತಿಪರರು ಇಲ್ಲಿ ಕಷ್ಟ ಜೀವನವನ್ನು ಅನುಭವಿಸುತ್ತಿದ್ದಾರೆಂದು ನೀವು ನಂಬುತ್ತಿದ್ದೀರಾ? ನೋಡುತ್ತಿದ್ದರೇ ಇಲ್ಲಿ ಸಜ್ಜನರು ಕಷ್ಟಗಳ ಪಾಲಾಗುತ್ತಿದ್ದಾರೆ. ದುರ್ಜನರು ವಿಲಾಸವಂತವಾದ ಜೀವನ ಕಳೆಯುತ್ತಿದ್ದಾರೆ?

**ನಾವು :–** ಸ್ವರ್ಗ ನರಕಗಳು ಇಲ್ಲೇ ಇರುವುದು ಮುಮ್ಮಾತಿಗೂ ನಿಜ. ಜ್ಞಾನಿಗಳು, ಸಜ್ಜನರು ಕಷ್ಟಗಳ ಪಾಲಾಗುವುದು, ದುರ್ಜನರು ಸುಖವಾಗಿ ಜೀವಿಸುವುದು ನಡೆಯುತ್ತಿರುವ ಸತ್ಯವೇ. ಮನುಷ್ಯ ಗತಜನ್ಮದಲ್ಲಿ ಮಾಡಿಕೊಂಡಿರುವುದು ಈ ಜನ್ಮದಲ್ಲಿ ಅನುಭವಿಸುತ್ತಿದ್ದಾನೆ. ಈ ಜನ್ಮದಲ್ಲಿ ಮಾಡಿಕೊಂಡ ಫಲವನ್ನು ಬರುವ ಜನ್ಮದಲ್ಲಿ ಅನುಭವಿಸುತ್ತಾನೆ. ಈ ವಿಷಯವಾಗಿ ಅಂತಿಮ ದೈವಗ್ರಂಥದಲ್ಲಿ ಹೀಗೆ ಬರೆಯಲಾಗಿದೆ ನೋಡಿರಿ. (54–52,53) (52) **"ಇವರು ಮಾಡುವುದೆಲ್ಲಾ ಕರ್ಮಪತ್ರಗಳಲ್ಲಿ ನಮೋದಾಗಿ ಇದೆ."** (53) **"ಹಾಗೇ ಪ್ರತಿ ಚಿಕ್ಕ, ದೊಡ್ಡ ವಿಷಯವೂ ಬರೆಯಲಾಗಿದೆ." (41–46) "ಯಾವುದಾದರೂ ಸತ್‌ಕಾರ್ಯವನ್ನು ಮಾಡಿದರೆ ಅದು ತನಗೆ ಒಳ್ಳೆಯದನ್ನು ಮಾಡುತ್ತದೆ. ಮತ್ತು ಯಾವುದಾದರೂ ದುಷ್ಕಾರ್ಯವನ್ನು ಮಾಡಿದರೆ ಅದರ ಪಾಪದ ಫಲಿತ ಆತನ ಮೇಲೆ ಬೀಳುತ್ತದೆ. ನಿನ್ನ ಪ್ರಭುವು ಮಾತ್ರ ದಾಸರಿಗೆ ಅನ್ಯಾಯ ಮಾಡುವವನಲ್ಲ." (57–22) "ಮನುಷ್ಯನಿಗೆ ಬರುವ ಯಾವ ಆಪತ್ತಾದರೂ ಸರಿ, ಅದು ಭೂಮಿಯಲ್ಲಿ ಬಂದಿರುವುದಾದರೂ, ಸ್ವತಃ ನಿಮ್ಮ ಪ್ರಾಣದ ಮೇಲೆಗೆ ಬಂದಿರುವುದಾದರೂ ನಿನ್ನನ್ನು ಹುಟ್ಟಿಸುವುದಕ್ಕಿಂತ ಮೊದಲೇ ಅದನ್ನು ಒಂದು ಪ್ರತ್ಯೇಕ ಗ್ರಂಥದಲ್ಲಿ ಬರೆಯಲಾಗಿದೆ. ಹಾಗೆ ಮಾಡುವುದು ಅಲ್ಲಾಗೆ ಬಹಳ ಸುಲಭ."** ಇಲ್ಲಿ ಈ ಆಯತ್‌ಗಳನ್ನು ನೋಡಿದ ನಂತರ ಮನುಷ್ಯರಿಗೆ ಕರ್ಮವನ್ನು ಕುರಿತ ವಿವರ ಸರಿಯಾಗಿ ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಭೂಮಿಮೇಲೆ ದೇವರಿಗೆ ತಿಳಿಯದಂತೆ ಏನೂ ನಡೆಯುವುದಿಲ್ಲ. ಒಬ್ಬ ಸಜ್ಜನನು ಕಷ್ಟಗಳ ಪಾಲಾದರೂ, ಒಬ್ಬ ದುರ್ಜನನು ಸುಖಗಳ ಪಾಲಾದರೂ ಅದು ಅವನು ಹುಟ್ಟುವುದಕ್ಕಿಂತ

ಮೊದಲು ಗತಜನ್ಮದಲ್ಲಿ ನಮೋದಾಗಿರುವುದೆಂದು, ಅದರ ಪ್ರಕಾರವೇ ಈಗ ಒಳ್ಳೆಯವನಿಗಾದರೂ ಕಷ್ಟಗಳು ಬರಬಹುದೆಂದು ತಿಳಿಯಬೇಕು. ಪುನರ್ಜನ್ಮ ವಿಷಯವನ್ನು ನಂಬದವರು ಕರ್ಮಗಳ ವಿಷಯವನ್ನು ತಿಳಿಯಲಾರರು. ನಾವು ಬರೆದ **"ಪುನರ್ಜನ್ಮ ರಹಸ್ಯ"** ಎಂಬ ಗ್ರಂಥವನ್ನು ಓದಿ. ನೀವು ಕಲೆತುಕೊಳ್ಳಬೇಕಾಗಿರುವುದು ಖುರಾನ್ ಗ್ರಂಥದಿಂದ ಗ್ರಹಿಸಬೇಕಾಗಿರುವುದು ಎಷ್ಟೋ ಇದೆ.

**ಖಾದಿರ್ :–** ಇದು ನೀವು ನಂಬುತ್ತೀರಾ? ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 10–34 ರಲ್ಲಿ ಹೀಗೆ ಇದೆ. ನಾನು ಭೂಮಿಮೇಲೆ ಸಮಾಧಾನವನ್ನು ಕಳುಹಿಸಲು ಬಂದಿದ್ದೇನೆಂದು ತಿಳಿಯಬೇಡ ಖಡ್ಗವನ್ನೇ ಆಗಲಿ ಸಮಾಧಾನವನ್ನು ಕಳುಹಿಸುವುದಕ್ಕೆ ನಾನು ಬರಲಿಲ್ಲ. ಯೇಸು ಅವರು ಖಡ್ಗವನ್ನು ಏಕೆ ಪ್ರಸ್ತಾವಿಸಿದ್ದಾರೆ?

**ನಾವು :–** ನಾವು ಏಕೆ ನಂಬುವುದಿಲ್ಲ! ಆ ವಾಕ್ಯ ಅರ್ಥ ಆಗದವರಿಗೆ ಯೇಸು ಹಿಂಸೆಯನ್ನು ಎಬ್ಬಿಸುವಂತಿದೆ. ಅರ್ಥವಾದವರಿಗೆ ಅದರಲ್ಲಿ ಎಷ್ಟೋ ಜ್ಞಾನವಿದೆ. ಖಡ್ಗ ಎಂದರೆ ಕಡೆದು ಹಾಕುವುದು. ಯೇಸು ಪ್ರಸ್ತಾಪಿಸಿದ ಖಡ್ಗ ಸಾಧಾರಣ ಖಡ್ಗವಲ್ಲ. ಅದು ಜ್ಞಾನಖಡ್ಗ. ಮನುಷ್ಯರು ಕೋರುವ ಕೋರಿಕೆಗಳನ್ನು ಈಡೇರಿಸಿ ಅವರನ್ನು ಸಮಾಧಾನ ಪಡಿಸುವುದಕ್ಕೆ ಯೇಸು ಬರಲಿಲ್ಲ. ಆತನು ಭವಬಂಧಗಳನ್ನು ಮುರಿಯುವುದು, ಪಾಪ ಖಂಡನ ಮಾಡುವ ಜ್ಞಾನಖಡ್ಗವನ್ನು ಪ್ರಜೆಗಳಿಗೆ ಕೊಡುವುದಕ್ಕೆ ಬಂದಿದ್ದಾನಾಗಲಿ, ಪ್ರಜೆಗಳ ಕೋರಿಕೆಗಳನ್ನು, ಪ್ರಾರ್ಥನೆಗಳನ್ನು ಈಡೇರಿಸುವುದಕ್ಕೆ ಬರಲಿಲ್ಲ. ಪ್ರಪಂಚ ಸಂಬಂಧ ಕೋರಿಕೆಗಳನ್ನು ಅವನ ಕರ್ಮಗಳನ್ನು ಬಿಟ್ಟು, ಅವನ ಕರ್ಮಗಳನ್ನು ಖಂಡಿಸುವ ಜ್ಞಾನ ಖಡ್ಗವನ್ನು ಕೊಡುವುದಕ್ಕೆ ಯೇಸು ಬಂದಿದ್ದಾನೆಂದು ನೀವೇಕೆ ಅಂದುಕೊಳ್ಳಲಿಲ್ಲ?

**ಖಾದಿರ್ :–** ಲೂಕಾ ಸುವಾರ್ತೆ 12–49ರಲ್ಲಿ ಹೀಗೆ ಇದೆ. **"ನಾನು ಭೂಮಿಮೇಲೆ ಅಗ್ನಿ ಹಾಕಲು ಬಂದಿದ್ದೇನೆ. ಅದು ಇದಕ್ಕೂ ಮೊದಲೇ ಹತ್ತಿಕೊಂಡು ಉರಿಯಬೇಕಾಗಿದೆಯೆಂದು ಎಷ್ಟೋ ಕೋರುತ್ತಿದ್ದೇನೆ"** ಯೇಸು ಅವರು ಮಾನವ ಸಮುದಾಯದಲ್ಲಿ ಚಿಚ್ಚು ಇಡುವುದಕ್ಕೇ ಬಂದಿದ್ದಾನೆಂದು ನೀವು ನಂಬುತ್ತೀರಾ?

**ನಾವು :–** ಕಳ್ಳನಿಗೆ ಕಳ್ಳನ ಚಿಂತೆ, ವ್ಯಭಿಚಾರಿಗೆ ವ್ಯಭಿಚಾರಿ ಚಿಂತೆ ಅಂದಹಾಗೆ ಅಗ್ನಿ ಎನ್ನುತ್ತಲೇ ಹೊರಗಿನ ಅಗ್ನಿ ಎಂದು ಏಕೆ ಅಂದುಕೊಳ್ಳಬೇಕು? ಜ್ಞಾನಾಗ್ನಿ ಎಂದು ಏಕೆ ಅಂದುಕೊಳ್ಳಬಾರದು. ಜ್ಞಾನಾಗ್ನಿ ಮನುಷ್ಯರಲ್ಲಿ ಪ್ರಜ್ವಲಿಸಿ ಜನರು ಕರ್ಮಗಳನ್ನು ಸುಟ್ಟುಕೊಳ್ಳಬೇಕೆಂದು ಯೇಸು ಕೋರುತ್ತಿದ್ದಾನೆ.

**ಖಾದಿರ್ :–** ದಿವ್ಯ ಖುರಾನ್ ದೈವಗ್ರಂಥನಾ ಅಥವಾ ಬೈಬಲ್‌ನಾ ಯಾವುದು? ಮುಸ್ಲಿಮ್ ವಿಶ್ವಾಸಿಗಳ ಪ್ರಕಾರ ಜಬೂರ್, ತೌರಾತ್, ಇಂಜೀಲ್ ದೈವಗ್ರಂಥಗಳು ಇವೆ. ಖುರಾನ್ ಪೂರ್ವ ಗ್ರಂಥಗಳನ್ನು ಧೃವಪಡಿಸುತ್ತದೆ. ಆಯಾ ಗ್ರಂಥ ಗಳಲ್ಲಿರುವ ಸತ್ಯ ಸಂದೇಶವನ್ನು ಬಲಪಡಿಸುತ್ತದೆ.

**ನಾವು :–** ದಿವ್ಯ ಖುರಾನ್, ಪರಿಶುದ್ಧ ಬೈಬಲ್, ಪವಿತ್ರ ಭಗವದ್ಗೀತೆ ಮೂರು ದೈವ ಗ್ರಂಥಗಳೇ 'ತೌರಾತ್, ಇಂಜೀಲ್‌ಗಳನ್ನು ಖುರಾನ್ ಬಲಪಡಿಸುತ್ತದೆ' ಎಂದು ನೀವೇ ಹೇಳಿದ್ದೀರಾ. ಇಂಜೀಲು ಎಂದರೇ ಬೈಬಲ್ ಎಂದೂ, ತೌರಾತ್ ಎಂದರೇ ಭಗವದ್ಗೀತೆಯೆಂದೂ ನಿಮಗೆ ತಿಳಿಯದಾ? ಜಬೂರ್ ಎನ್ನುವುದು ಗ್ರಂಥವಲ್ಲ. ಗ್ರಂಥವಾಗಿ ಬರೆಯಲಾಗದ ದೈವಬೋಧನೆಯನ್ನು ಜಬೂರ್ ಎನ್ನುತ್ತಾರೆ. ಇದು ತಿಳಿಯಬೇಕೆಂದರೇ ಹಿಂದಿನ ಚರಿತ್ರೆಯನ್ನು ತಿಳಿದಿರಬೇಕು. ಯಾರೋ ಹೇಳಿದರೇ ಕೇಳಬಾರದು.

**ಖಾದಿರ್ :–** ದಿವ್ಯ ಖುರಾನ್‌ನಲ್ಲಿ ಅನೇಕ ಬಾರಿ ಈ ಗ್ರಂಥ ಸಮಸ್ತ ಲೋಕಗಳ ಪ್ರಭುವಾದ ಅಲ್ಲಾಹ್ ಕಡೆಯಿಂದ ಅವತರಿಸಿದೆ ಎಂದು ಹೇಳುವುದು ನಡೆದಿದೆ. ಆದರೇ ಬೈಬಲ್ ಅವತರಿಸಿದ ಗ್ರಂಥ ಎಂದು ಒಂದು ಕಡೆಯೂ ಸಹ ಪ್ರಸ್ತಾವನೆ ಬರಲಿಲ್ಲ. ಮೇಲಾಗಿ ಅದನ್ನು ರಚನೆ ಎಂದು ಅಂದಿದ್ದಾರೆ.

**ನಾವು :–** ದಿವ್ಯ ಖುರಾನ್ ಗ್ರಂಥವನ್ನು ಮಹಾಜ್ಞಾನಿ ಆದ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ 23 ಸಂವತ್ಸರಗಳು ಹೇಳಲಾಗಿದೆ. ಅವತರಿಸುವುದು ಎಂದರೇ ಒಂದೇ ಬಾರಿ ಹುಟ್ಟುವುದು ಅಥವಾ ಬರುವುದು ಎಂದರ್ಥ. ಬೈಬಲ್ ಗ್ರಂಥವನ್ನು ಮನುಷ್ಯರು ಹೇಳಿದರೂ ಅದರಲ್ಲಿ ನಾಲ್ಕು ಸುವಾರ್ತೆಗಳನ್ನು ಸ್ವತಃವಾಗಿ ಯೇಸು ಹೇಳಿದ್ದಾನೆ. ಯೇಸು ಹೇಳಿದ ನಾಲ್ಕು ಸುವಾರ್ತೆಗಳನ್ನು

ನಾಲ್ವರು ವ್ಯಕ್ತಿಗಳು ಬರೆದಿದ್ದಾರೆ. ಅಕ್ಬರು ಚಕ್ರವರ್ತಿ ಮಾರು ವೇಷದಲ್ಲಿ ಸಂಚರಿಸಿದಂತೆ ದೇವರು ತನ್ನ ಮಾರುವೇಷದಲ್ಲಿ ಭೂಮಿಮೇಲೆ ಸಂಚರಿಸಿದಾಗ ಆತನನ್ನು 'ದೇವರು' ಎಂದು ಅನ್ನಬಾರದು. **'ದೇವರು ಅವತರಿಸುತ್ತಾನೆ'** ಎಂದು ಖುರಾನ್‌ನಲ್ಲಿ ಸೂರಾ 89–21,22 ಆಯತ್‌ಗಳಲ್ಲಿ ಹೇಳಲಾಗಿದೆ. ದೇವರು ದೇವರಾಗಿ ಭೂಮಿಮೇಲೆ ಅವತರಿಸದೇ ಭಗವಂತನಾಗಿ ಅವತರಿಸುತ್ತಾನೆ. ಕೃಷ್ಣನು, ಯೇಸು ಎರಡು ಜನ್ಮಗಳು ಭಗವಂತನ ಜನ್ಮಗಳೇ. ಅವರು ಮನುಷ್ಯರ ಹಾಗೆ ಕಾಣಿಸಿದರೂ ಮನುಷ್ಯರು ಅಲ್ಲ, ಹಾಗೆಂದು ದೇವರೂ ಅಲ್ಲ. ಮನುಷ್ಯ ಅಲ್ಲದೆ ದೇವರು ಅಲ್ಲದೆ ಮಧ್ಯದಲ್ಲಿ ಭಗವಂತನಾಗಿ ಮಾತ್ರ ಇರುತ್ತಾರೆ. ಭಗವಂತನು ಬೇರೆ, ದೇವರು ಬೇರೆ.

**ಖಾದಿರ್ :–** ವಿಗ್ರಹಾರಾಧನೆ ಮಾಡುವುದು ಮೂರ್ಖತ್ವ ಎನ್ನುತ್ತದೆ ಭಗವದ್ಗೀತೆ, ವಿಗ್ರಹಾರಾಧನೆ ದೇವರ ಆಗ್ರಹಕ್ಕೆ ಗುರಿ ಮಾಡುತ್ತದೆಂದು ಬೈಬಲ್ ಹೇಳುತ್ತಿದೆ. ಕ್ಷಮಿಸಲಾರದ ನೇರ ಎನ್ನುತ್ತದೆ ದಿವ್ಯ ಖುರಾನ್. ವಿಗ್ರಹಾರಾಧನೆ ಕಡೆ ನಿಮ್ಮ ಅಭಿಪ್ರಾಯವೇನು?

**ನಾವು :–** ವಿಗ್ರಹಾರಾಧನೆಯನ್ನು ವಿರೋಧಿಸುವುದರಲ್ಲಿ ನಿಮಗಿಂತ ಮೊದಲು ನಾವೇ ಇದ್ದೇವೆ. ಆದರೇ ಪ್ರತಿಮೆಯನ್ನು ಗೌರವಿಸುತ್ತೇವಾಗಲೀ, ಪ್ರತಿಮೆಯನ್ನು ದೇವರೆಂದು ನಾವು ಎಲ್ಲೂ ಹೇಳಲಿಲ್ಲ. ಭಗವಂತನ ಪ್ರತಿ ರೂಪವನ್ನು ಪ್ರತಿಮೆ ಎನ್ನುತ್ತಾರೆ. ಭೂಮಿ ಮೇಲೆ ಭಗವಂತನ ಅವತಾರಗಳು ಎರಡೇ ಇವೆ. ಒಂದು ಶ್ರೀಕೃಷ್ಣನು, ಎರಡು ಯೇಸು. ಯೇಸನ್ನು ಕ್ರೈಸ್ತವರೂ ಸಹ ಪ್ರತಿಮೆಯಾಗಿ ಇಟ್ಟುಕೊಳ್ಳುವುದಿಲ್ಲ. ಅದರಿಂದ ಕೃಷ್ಣನ ಆಕಾರ ಒಂದು ಮಾತ್ರವೇ ಪ್ರತಿಮೆ ಯಾಗುತ್ತದೆ. ಪ್ರತಿಮೆ ಸಹ ಮನುಷ್ಯರಿಂದ ಮಾಡಿದ್ದರೂ, ವಿಗ್ರಹದಂತೆ ಗೊಂಬೆಯಂತಿದ್ದರೂ, ಪ್ರತಿಮೆಗೂ ವಿಗ್ರಹಕ್ಕೂ ಎಷ್ಟೋ ವ್ಯತ್ಯಾಸವಿದೆ. ಪ್ರತಿಮೆಯಲ್ಲಿ ದೇವತೆಗಳಿರುವುದಿಲ್ಲ. ವಿಗ್ರಹದಲ್ಲಿ ದೇವತೆಗಳು ಸಜೀವವಾಗಿ ಇರುತ್ತಾರೆ. ಭೂಮಿಮೇಲೆ ದೈವಜ್ಞಾನವನ್ನು ಅನುಸರಿಸಿ ಆಕಾರವಿರುವ ಪ್ರತಿಮೆ ಭಗವಂತನ ಗುರುತು. ಆಕಾರವಿಲ್ಲದ ಲಿಂಗ ದೇವರ ಗುರುತು. ಲಿಂಗ ಪ್ರತಿಮೆಯೂ ಸಹ ಅಲ್ಲ. ಅದಕ್ಕೆ ಆಕಾರವೇ ಇಲ್ಲ.

**ಖಾದಿರ್ :–** ದಿವ್ಯ ಖುರ್‌ಆನ್ (3–7) ವಾಕ್ಯದಲ್ಲಿ ಮುತಷಾಬಿಹಾತ್ ವಾಕ್ಯಗಳ ವಿಷಯದಲ್ಲಿ ಹೃದಯಗಳಲ್ಲಿ ವಕ್ರತೆ ಇರುವವರು ವಿಪರೀತ ತಾತ್ಪರ್ಯಗಳನ್ನು ತೆಗೆದುಕೊಳ್ಳುತ್ತಾರೆ ಎಂದು ಇದೆ. ಇದಕ್ಕೇನನ್ನುತ್ತೀರ?

**ನಾವು :–** ದೇವರು ತನ್ನ ಗ್ರಂಥದಲ್ಲಿ ಮುತಷಾಬಿಹಾತ್ ವಾಕ್ಯಗಳಿದ್ದಂತೆ ಹೇಳುವುದು ವಾಸ್ತವವೇ. ಕೆಲವರು ವಕ್ರಬುದ್ಧಿ ಇರುವವರು ಅವುಗಳಿಗೆ ವಿಪರೀತ ಅರ್ಥಗಳನ್ನು ಹೇಳುವರೆಂದು ಹೇಳಿದ ಮಾತು ವಾಸ್ತವವೇ. ವಕ್ರಬುದ್ಧಿ ಇರುವವರ ಮಾತನ್ನು ಕೇಳಬೇಡ ಎಂದಿದ್ದಾನಾಗಲೀ, ಆ ವಾಕ್ಯಗಳನ್ನು ತಿಳಿದುಕೊಳ್ಳದಂತೆ ಬಿಟ್ಟುಹಾಕೆಂದು ಹೇಳಲಿಲ್ಲ. ಅದೇ ವಾಕ್ಯದಲ್ಲಿ ಬುದ್ಧಿ, ಶ್ರದ್ಧೆ ಇರುವವನನು ನನ್ನ ಬೋಧನೆಯನ್ನು ಗ್ರಹಿಸಬಲ್ಲನು ಎಂದು ಸಹ ಹೇಳಿದ್ದಾನೆಂದು ಮರೆತುಹೋಗಬಾರದು. ಮುತಷಾಬಿಹಾತ್ ವಾಕ್ಯಗಳ ತಂಟೆಗೆ ನಾವು ಹೋಗುವುದಿಲ್ಲ ಅವು ನಮಗೆ ಅವಶ್ಯವಿಲ್ಲ ಎಂದು ಅಂದರೇ ಖುರಾನ್ ಜ್ಞಾನ ಅರ್ಥಕ್ಕೂ ಮೇಲ್ಪಟ್ಟು ತಿಳಿಯದೆಂದೇ ಅರ್ಥ. ಸೂಕ್ಷ್ಮವಾಕ್ಯಗಳ ವಿವರ ದೇವರಿಗೆ ಹೊರತು ಮನುಷ್ಯರಿಗೆ ತಿಳಿಯದೆಂದು ಅಲ್ಲೇ ಹೇಳಿದ್ದಾರಲ್ಲವೆ, ಮನುಷ್ಯನಾಗದ ಮನುಷ್ಯನಹಾಗೆ ಇರುವವನು ಬಂದು ಹೇಳಿದರೂ ಕೇಳದವನು ಮುಂದಕ್ಕೆ ಹೋಗಲಾರನು. ಜ್ಞಾನಿಆಗಲಾರನು.

**ಖಾದಿರ್ :–** ಪ್ರತಿಮೆ ಬೇರೆ, ವಿಗ್ರಹಬೇರೆಯೆಂದು, ಕೃಷ್ಣನ ಪ್ರತಿಮೆ ಭಗವಂತನೆಂದು, ಸಣ್ಣ ಪುಟ್ಟ ದೇವತೆಗಳು ವಿಗ್ರಹವಲ್ಲವೆಂಬ ಸತ್ಯವನ್ನು ಅಸತ್ಯದೊಂದಿಗೆ ಸೇರಿಸಿ ಸಾಮಾನ್ಯ ಜನರನ್ನು ಏಕೆ ಮಭ್ಯವಿರಿಸುತ್ತೀರಾ? ನೀವು ಹೀಗೆ ಹೇಳುವುದರಿಂದ ನಿಮ್ಮ ಪರಲೋಕ ಜೀವನವನ್ನು ನಾಶ ಮಾಡಿಕೊಳ್ಳಬೇಡಿ?

**ನಾವು :–** ಸಣ್ಣ ಪುಟ್ಟ ದೇವತೆಗಳು ವಿಗ್ರಹವಲ್ಲವೆಂದು ನಾವು ಎಲ್ಲೂ ಹೇಳಲಿಲ್ಲವೇ! ಮೆಲಾಗಿ ಸಣ್ಣ ಪುಟ್ಟ ದೇವತೆಗಳನ್ನು ಮುಗಿಯಬೇಡವೆಂದೇ ಹೇಳುತ್ತಿದ್ದೇವೆ. ನಿಮಗೆ ದೇವರು ಎಂದರೇ ಮಂಡು ಗುರುತಾಗಿ ತಿಳಿದಿದೆಯಾಗಲೀ, ದೇವರವೊಂದರ ಪೂರ್ತಿ ವಿವರ ತಿಳಿಯದು. ದೇವರಿಗೆ ಪ್ರಾಥಮಿಕ ಧರ್ಮ ಒಂದು ಇದೆ ಅದನ್ನು ಯಾರೂ ಅತಿಕ್ರಮಿಸಬಾರದು.

**"ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು"** ಎನ್ನುವುದು ದೇವರ ಮುಖ್ಯ ಧರ್ಮ. ರೂಪವಿರುವವನು, ಹೆಸರು ಹೊಂದಿದವನು, ಕೆಲಸ ಮಾಡುವವನು ದೇವರು ಅಲ್ಲವೆಂದು ನಾವು ಮೊದಲಿನಿಂದ ಹೇಳುತ್ತಿದ್ದೇವೆ. ನಿಮಗೆ ಅರ್ಥವಾಗದೆ ಗೊಂದಲದಲ್ಲಿ ಸಿಕ್ಕಿಕೊಳ್ಳುತ್ತಿದ್ದೀರ. ರೂಪ, ಹೆಸರು, ಕಾರ್ಯಗಳು ಇರುವ ಕೃಷ್ಣನು ಭಗವಂತನು ಮಾತ್ರವೆ. ತಾಯಿಗರ್ಭವನ್ನು ಭಗ ಎನ್ನುತ್ತೇವೆ. ಭಗದಿಂದ ಹುಟ್ಟಿದವನು ಯಾವನಾದರೂ ಭಗವಂತನೆಯಾಗುತ್ತಾನೆ. ತಾಯಿಗರ್ಭದಿಂದ ಹುಟ್ಟಿದವನು ಕೃಷ್ಣನು, ಯೇಸು ಹೊರತು ಭೂಮಿಯಮೇಲೆ ಯಾರಾದರೂ ಇದ್ದಾರೇನೋ ತೋರಿಸಬಲ್ಲಿರಾ? ಪ್ರತಿಮಾತು ಶಾಸ್ತ್ರಬದ್ಧವಾಗಿ ಇರಬೇಕೆಂದು ಖುರಾನ್ ಗ್ರಂಥದಲ್ಲಿ ಸೂರಾ 40, ಆಯತ್ 35ರಲ್ಲಿ **"ಅವರು ತಮ್ಮ ಹತ್ತಿರಕ್ಕೆ ಬಂದಿರುವ ಯಾವ ಪ್ರಮಾನ ಇಲ್ಲದಂತೆಯೇ ಅಲ್ಲಾಹ್ ನಿದರ್ಶನಗಳ ವಿಷಯದಲ್ಲಿ ಮಂಡದಾಗಿ ಮಾತನಾಡುತ್ತಾರೆ"** ಎಂದು ಇದೆ. ಆ ವಿಧವಾಗಿಯೇ ನೀವು ಪ್ರತಿಯೊಂದು ಕಡೆ ಗ್ರಂಥ ಆಧಾರವಿಲ್ಲದೆ ಮಾತನಾಡುತ್ತಿದ್ದೀರ. ಪ್ರತಿಯೊಬ್ಬರೂ ನಾವು ತಾಯಿಗರ್ಭದಿಂದಲೇ ಹುಟ್ಟಿದ್ದೇವಲ್ಲವೆ! ಎಂದು ಅಂದುಕೊಳ್ಳುತ್ತಿದ್ದಾರೆ. ಅದು ವಾಸ್ತವವೋ ಅಲ್ಲವೋ ನೋಡಿಕೊಳ್ಳಿ. ಪ್ರಪಂಚದಲ್ಲಿ ದೇವರು ಹೊರತು ಯಾವನೂ ಭಗವಂತನಾಗಿ ತಾಯಿಗರ್ಭದಲ್ಲಿ ಹುಟ್ಟುವ ಅವಕಾಶವೇ ಇಲ್ಲ, ಇದು ಶಾಸನ.

**ಖಾದಿರ್ :–** ದಿವ್ಯ ಖುರಾನ್ ಸೂರಾ 50, ಆಯತ್ 21ನೇ ವಾಕ್ಯದಲ್ಲಿ "ನಡೆಸುವವನು, ಸಾಕ್ಷಿಕೊಡುವವನು" ಎಂದು ಇದೆ. ನೀವು ಸತ್ಯಾನ್ವೇಷಕರಾದರೇ 18 ರಿಂದ 30 ವಾಕ್ಯದ ವರೆಗು ಪ್ರಶಾಂತವಾಗಿ ಓದಿ. ಸತ್ಯ ಏನೋ ನಿಮಗೇ ತಿಳಿಯುತ್ತದೆ.

**ನಾವು :–** ಮೆದುಳಿನಲ್ಲಿ 'ನನಗೆ ತಿಳಿದಿರುವುದು ಇತರರಿಗೆ ತಿಳಿಯದೆಂಬ' ಭಾವವಿರುವವರೆಗು ಯಾರೂ ಯಾವುದೂ ಗ್ರಹಿಸುವುದಿಲ್ಲ. ನಾವು ವಾಕ್ಯವನ್ನು ಓದುತ್ತಿದ್ದರೇ ಕಣ್ಣ ಮುಂದೆ ದೃಶ್ಯ ಕಾಣಿಸಿದಂತೆ ಅದರಲ್ಲಿನ ಭಾವ ಕಾಣಿಸುತ್ತಿರುತ್ತದೆ. ನಾವು ಕಲೆಯಬೇಕಾಗಿರುವುದು, ಹೊಂದಿಸಿಕೊಳ್ಳಬೇಕಾಗಿರು ವುದು ಯಾವುದೂ ಇಲ್ಲ. ನನ್ನ ವಿಷಯ ಅಲ್ಲಿಟ್ಟು 18 ರಿಂದ 30 ವಾಕ್ಯಗಳನ್ನು

ಓದಿದರೇ ಎಲ್ಲಾ ಅವಶ್ಯವಿಲ್ಲ ಆದರೇ, 20ನೇ ವಾಕ್ಯದಲ್ಲಿ **"ಪುನರುತ್ಥಾನ ದಿನ"** ಎಂದು ಹೇಳಲಾಗಿದೆ. 19ನೇ ವಾಕ್ಯದಲ್ಲಿ **"ಮರಣ"**ವನ್ನು ಕುರಿತು ಹೇಳಿದ್ದಾರೆ. ಮರಣದಲ್ಲಿ ಏನು ನಡೆಯುತ್ತದೋ ನಿಮಗೆ ತಿಳಿದಿದೆಯಾ? ಪುನಃ ಏಳಿಸುವ **'ಪುನರಾವೃತ್ತ ದಿನ'** ಎಂದರೇ ಏನೋ, ಅದು ಯಾವಾಗ ಬರುತ್ತದೋ ನಿಮಗೆ ತಿಳಿದಿದೆಯಾ? ಈ ಎರಡರಲ್ಲಿ ಸ್ವಲ್ಪವಾದರೂ ಪ್ರತ್ಯಕ್ಷ ಅನುಭವವಿದೆಯಾ? ಇಲ್ಲವೇ ಇತರರು ಹೇಳುವುದನ್ನನುಸರಿಸಿ ನೀವು ಹೇಳುತ್ತಿದ್ದೀರಾ? ಒಂದುಬಾರಿ ನಿಮ್ಮ ಎದೆಯಮೇಲೆ ನಿಮ್ಮ ಕೈಯ್ಯನ್ನು ಹಾಕಿಕೊಂಡು ವಾಸ್ತವವಾಗಿ ನಿಮಗೆ ಏನು ತಿಳಿದಿದೆಯೋ ನೋಡಿಕೊಳ್ಳಿ. ನಾವು ಬರೆದ **"ಜನನ ಮರಣ ಸಿದ್ಧಾಂತ"**ವನ್ನು ಓದಿ. ಮರಣವೆಂದರೇ ಏನೋ ತಿಳಿಯುತ್ತದೆ. ಪ್ರಳಯಕಾಲದಲ್ಲಿ ಮನುಷ್ಯರು ಪುನಃ ಏಳಿಸಲಾಗುತ್ತಾರೆಂದು ಖುರಾನ್ ಗ್ರಂಥದಲ್ಲಿ ಇದೆ. ಖುರಾನ್ ಸ್ವಚ್ಛವಾದ ದೈವ ಗ್ರಂಥ. ಅದು ಎಲ್ಲಾ ಸತ್ಯಸಮೇತವಾಗಿ ಇದೆ. ಅದರಲ್ಲಿ ಹೇಳಿದ ಪ್ರಳಯ ಕಾಲವನ್ನು ಇಲ್ಲಿಯವರೆಗು ಯಾರೂ ಅರ್ಥ ಮಾಡಿಕೊಳ್ಳಲಿಲ್ಲವೆಂದು ತಿಳಿದುಹೋಗಿದೆ. ಪ್ರಳಯದಲ್ಲಿ ಸಮಾಧಿಗಳಿಂದ ಏಳಿಸಲಾಗುತ್ತಾರೆ ಎಂಬ ಮಾತು ವಾಸ್ತವವೇ. **"ಸಮಾಧಿ"** ಎಂದರೇ ಏನೋ ತಿಳಿದಿದೆಯಾ? ಮನುಷ್ಯನನ್ನು ಊತಿಟ್ಟ ಕುಣಿಗಳು ಸಮಾಧಿಗಳಾದರೆ, ಮನುಷ್ಯನನ್ನು ಊತಿಡದಂತೆ ಪ್ರಾಣಿಗಳು ಕಾಡಿನಲ್ಲಿ ತಿಂದುಹಾಕಿವೆಯೆಂದುಕೊಳ್ಳಿ, ಆಗ ಯಾವ ಸಮಾಧಿಯಿಂದ ಏಳಿಸುತ್ತಾರೆ? ಅವನು ಎಲ್ಲಿಂದ ಏಳುತ್ತಾನೆ? ಪ್ರಮಾದವಶಾತ್ತು ಅಗ್ನಿಯಲ್ಲಿ ಸುಟ್ಟು ಬೂದಿಯಾಗಿ ಬೂದಿಯೂ ಸಹ ಮಳೆಯಲ್ಲಿ ಕರಗಿ ಹೋಗಿದೆಯೆಂದುಕೊಳ್ಳಿ, ಅಂತಹವನು ಎಲ್ಲಿಂದ ಎದ್ದು ಬರುತ್ತಾನೆ? ದೇವರು ಎದುರು ಪ್ರಶ್ನೆ ಇಲ್ಲದಂತಹ ಜ್ಞಾನವನ್ನು ಮನುಷ್ಯರಿಗೆ ಕೊಟ್ಟರೇ, ಮನುಷ್ಯರು ಪ್ರಶ್ನೆಗೆ ಉತ್ತರವಿಲ್ಲದ ಜ್ಞಾನವನ್ನು ಹೇಳಿ, ದೇವರ ಮಾತನ್ನು ಅಗೌರವಪಡಿಸುತ್ತಿದ್ದಾರೆ. ಸಾವು ಎಂದರೆ ಏನೋ? ಸಮಾಧಿ ಎಂದರೇ ಏನೋ ತಿಳಿಯದಂತೆ, ನೀವು ಸತ್ಯ ತಿಳಿಯದಂತೆ, ನಮ್ಮನ್ನೇ ಸತ್ಯ ತಿಳಿದುಕೋ ಎನ್ನುತ್ತಿದ್ದಾರೆ. ನನಗೆ ತಿಳಿದ ಸತ್ಯ ತಿಳಿದಿದೆಯಾಗಲೀ, ನನ್ನ ಪ್ರಶ್ನೆಗಳಿಗೆ ನೀವು ಉತ್ತರ ಶಾಸ್ತ್ರಬದ್ಧವಾಗಿ ಹೇಳಬಲ್ಲಿರಾ? ಶಾಸ್ತ್ರಬದ್ಧವಾಗಿ

ಹೇಳಬೇಕೆಂದರೆ ಸಾವಿನಲ್ಲಿ ಏನು ನಡೆಯುತ್ತಿದೆಯೋ, ಹುಟ್ಟುವಿಕೆಯಲ್ಲಿ ಏನು ನಡೆಯುತ್ತಿದೆಯೋ ತಿಳಿದಿರಬೇಕು. ಆಗಲೇ ಸಮಾಧಿ ಎಂದರೇ ಹಾಗೂ ಪ್ರಳಯ ಎಂದರೇ ತಿಳಿಯಬಲ್ಲದು. ಇಂದಿಗಾದರೂ ಮೀರಿರುವುದು ಏನೂ ಇಲ್ಲ. ದೇವರು ಹೇಳಿದ ಸತ್ಯ ತಿಳಿಯಬೇಕೆಂದರೇ, ಖುರಾನ್ ಗ್ರಂಥದಲ್ಲಿನ ಪ್ರತಿ ವಾಕ್ಯ ಸತ್ಯವಾಗಿದ್ದೂ ಯಾರಿಗಾದರೂ ಉತ್ತರ ಕೊಡಬಲ್ಲದೆಂದು ತಿಳಿಯಿರಿ. ನಾವು ಬರೆದ **"ಸಮಾಧಿ", "ಜನನ ಮರಣ ಸಿದ್ಧಾಂತ", ಮರಣ ರಹಸ್ಯ", ಪುನರ್ಜನ್ಮ ರಹಸ್ಯ"** ಎಂಬ ಗ್ರಂಥಗಳು ಓದಿ. ಅಗ ಖುರಾನ್ ಗ್ರಂಥ ಎಷ್ಟು ಉನ್ನತ ಸ್ಥಾಯಿಯಲ್ಲಿ ಇದೆಯೋ ಅರ್ಥವಾಗುತ್ತದೆ. ಈಗ ಖುರಾನ್‌ನಲ್ಲಿನ ಪ್ರತಿ ವಾಕ್ಯವನ್ನು ಸತ್ಯಸಮೇತವಾಗಿ ಬಿಡಿಸಿ ಹೇಳಬಹುದು.

ಸೂರಾ 50, ಆಯತ್ 21ರಲ್ಲಿ ಇರುವ ವಿಷಯ ಮೂರು ಆತ್ಮಗಳ ವಿಷಯ. ಇದೇ ವಿಷಯವನ್ನೇ ಭಗವದ್ಗೀತೆ ಗ್ರಂಥದಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16,17 ನೇ ಶ್ಲೋಕಗಳಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮ ನೆಂದು ಯಾರನ್ನಾದರೇ ಹೇಳಿದ್ದಾರೋ, ಅವರನ್ನು ಕುರಿತು ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆಯಲ್ಲಿ 28ನೇ ಅಧ್ಯಾಯ 19,20 ವಚನಗಳಲ್ಲಿ ತಂದೆ, ಕುಮಾರನು, ಪರಿಶುದ್ಧಾತ್ಮಯೆಂದು ಹೇಳಿದ್ದಾರೆ. ಇದೇ ವಿಷಯವನ್ನೇ ದಿವ್ಯ ಖುರಾನ್ ಗ್ರಂಥದಲ್ಲಿ ಸೂರಾ 50, ಆಯತ್ 21ರಲ್ಲಿ **"ನಡೆಸಬೇಕಾದವನು, ನಡೆಸುವವನು, ಸಾಕ್ಷಿಯಾಗಿ ಇರುವವನು"** ಎಂದು ಹೇಳಿದ್ದಾರೆ. ಈ ಮೂರು ಗ್ರಂಥಗಳ ವಿಷಯುವನ್ನು ಒಂದೇ ವಿಷಯುವಾಗಿ ಗ್ರಹಿಸಬಹುದು. ಭಗವದ್ಗೀತೆಯಲ್ಲಿ ಕ್ಷರನು ಎಂದರೆ ನಾಶವಾಗುವವನು ಎಂದೂ, ಅಕ್ಷರನೆಂದರೆ ನಾಶವಾಗದವನೂ ಎಂದೂ, ಪುರುಷೋತ್ತಮನು ಎಂದರೆ ಇಬ್ಬರು ಪುರುಷರಿಗಿಂತ ಉತ್ತಮನು ಎಂಬ ಅರ್ಥದಿಂದ ಹೇಳಿದ್ದಾರೆ. ಭಗವದ್ಗೀತೆ ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಸಮಯಸ್ಫೂರ್ತಿ ಯಾಗಿ ಹೇಳಿದ್ದಾರೆ. ಭಗವದ್ಗೀತೆಯಲ್ಲಿ ಲೋಕದಲ್ಲಿ ಇಬ್ಬರು ಪುರುಷರಿದ್ದಾ ರೆಂದೂ ಅವರನ್ನೇ ಕ್ಷರನು, ಅಕ್ಷರನು ಎನ್ನುತ್ತಾರೆಂದೂ, ಕ್ಷರನು ಸರ್ವ ಜೀವರಾಶಿಗಳಲ್ಲಿ ನಾಶವಾಗುವ ಜೀವತ್ಮನಾಗಿ ಇರುವಾಗ, ಅಕ್ಷರನು ನಾಶವಾಗದ ಆತ್ಮವಾಗಿ

ಜೀವನೊಂದಿಗೆ ಇದ್ದಾನೆಂದು ಹೇಳುವುದೇ ಅಲ್ಲದೆ, ಇಬ್ಬರ ಪುರುಷರಿಗಿಂತ ಎಂದರೆ ಕ್ಷರನು ಅಕ್ಷರನಿಗಿಂತ ಉತ್ತಮವಾದ ಪುರುಷನು ಮತ್ತೊಬ್ಬನಿದ್ದಾನೆಂದು, ಆತನನ್ನೇ ಪುರುಷೋತ್ತಮನು ಎನ್ನುತ್ತಾರೆಂದು ಹೇಳಿದ್ದಾರೆ. ಕ್ಷರ, ಅಕ್ಷರ, ಪುರುಷೋತ್ತಮರೆಂಬ ಮೂವರ ಪ್ರಸ್ತಾವನೆ ಬೈಬಲ್ ಮತ್ತಾಯ ಸುವಾರ್ತೆ ಕೊನೆಯಲ್ಲಿ ಹೇಳುತ್ತಾ ಕ್ಷರನನ್ನು ಕುಮಾರನೆಂದೂ, ಅಕ್ಷರನನ್ನು ತಂದೆ ಎಂದೂ, ಪುರುಷೋತ್ತಮನಾದ ದೇವರನ್ನು ಪರಿಶುದ್ಧಾತ್ಮಯೆಂದೂ ಹೇಳಲಾಗಿದೆ. ಅದೇ ವಿಷಯುವನ್ನೇ ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ದೇವರು ಬುದ್ಧಿವಂತಿಗೆಯಿಂದ ಜೀವಿಯನ್ನು ನಡೆಸಬೇಕಾದವನೆಂದೂ, ಆತ್ಮನನ್ನು ನಡೆಸುವವನು ಎಂದೂ, ದೇವರನ್ನು ಸಾಕ್ಷಿ ಎಂದೂ ಹೇಳಿದ್ದಾರೆ. ಈ ಮೂರು ಆತ್ಮಗಳ ವಿಷಯ ಭಗವದ್ಗೀತೆಯನ್ನು ಬೋಧಿಸುವ ಸ್ವಾಮೀಜೀಗಳಿಗೇ ಅರ್ಥವಾಗಲಿಲ್ಲ. ನಮ್ಮಿಂದ ರಚಿಸಲಾಗಿರು ವಂತಹ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಹೊರತು ಮೂರು ಆತ್ಮಗ್ಗಳ ವಿವರ ಯಾವ ಭಗವದ್ಗೀತೆಯಲ್ಲಿ ಇಲ್ಲ. ಪ್ರಥಮ ದೈವಗ್ರಂಥವಾದ ಭಗವದ್ಗೀತಾ ಜ್ಞಾನವೇ ಹಿಂದೂಗಳಲ್ಲಿನ ಸ್ವಾಮೀಜಿಗಳಿಗೆ ಅರ್ಥವಾಗದಿರುವಾಗ, ಮತ ಹುಚ್ಚಿನಲ್ಲಿ ಮುಳುಗಿಹೋದ ಉಳಿದವರಿಗೆ ಅರ್ಥವಾಗುವುದು ದುರ್ಲಭ. ಶರೀರ ಯಂತ್ರಾಂಗವನ್ನು ತಿಳಿದ ಯೋಗಿಗಳಿಗೆ ಹೊರತು, ಇತರರಿಗೆ ಮೂರು ಆತ್ಮಗಳ ವಿವರ ಅರ್ಥವಾಗುವುದಕ್ಕೆ ಅವಕಾಶವಿಲ್ಲ. ಹಾಗಿರುವಾಗ ಇಲ್ಲಿ ಕ್ರೈಸ್ತರಿಗೂ, ಅಲ್ಲಿ ಮುಸ್ಲಿಮ್‌ರಿಗೂ ಏನು ಅರ್ಥವಾಗಿದೆಯೋ, ಮೂರು ಆತ್ಮಗಳ ಸಿದ್ಧಾಂತವನ್ನು **"ತ್ರೈತ ಸಿದ್ಧಾಂತ"** ಎಂಬ ಹೆಸರನ್ನು ಇಟ್ಟು ನಾವು ವಿವರವಾಗಿ ಹೇಳುತ್ತಿದ್ದರೂ ಅರ್ಥ ಮಾಡಿಕೊಳ್ಳದಿದ್ದರೂ, ನಮ್ಮನ್ನು ಹೇಳನೆ ಮಾಡುವವರಿಗೆ ಸಾಕ್ಷಿ ಯಾರೋ, ನಡೆಸುವವನು ಯಾರೋ, ನಡೆಸಬೇಕಾದವನು ಯಾರೋ ಹೇಗೆ ತಿಳಿಯಬಲ್ಲದು? ಒಂದು ವೇಳೆ ನನಗೆ ತಿಳಿದಿದೆ ಎಂದರೂ ಅದು ಅಸತ್ಯವೇ ಹೊರತು ಸತ್ಯವಲ್ಲ. ಅಷ್ಟೇಕೆ ಈಗ ನೀವು ಹೇಳಿದ್ದೀರಲ್ಲವೆ! 18ರಿಂದ 30ರವರೆಗು ಓದಿರಿ. ನನ್ನ ವಿಷಯವನ್ನು ಪಕ್ಕಕ್ಕೆ ಇಟ್ಟು, 'ಮೂವರ' ವಿಷಯ ನನಗೆ ತಿಳಿಯದೆಂದುಕೊಳ್ಳಿ. ನಿಮಗೆ ತಿಳಿದಿದೆಯೇನೋ ನೋಡಿಕೊಳ್ಳಿ. ತಿಳಿದಿದ್ದರೇ

ದೇವರಿಗೆ ಹೇಳಿಕೊಳ್ಳಿ, ನಿಮ್ಮ ಜ್ಞಾನ ಸರಿಯಾಗಿರುವುದಾದರೇ ದೇವರು ನಿಮ್ಮನ್ನು ಹತ್ತಿರಕ್ಕೆ ತೆಗೆದುಕೊಳ್ಳುತ್ತಾನೆ, ಸರಿಯಾಗಿರುವುದು ಅಲ್ಲದೇ ಹೋದರೇ ನಿಮ್ಮನ್ನು ತನ್ನಿಂದ ದೂರವಾಗಿ ತಳ್ಳುತ್ತಾನೆ.

**ಖಾದಿರ್ :–** ಪ್ರಿಯ ಸೋದರರರೇ! ಖುರಾನ್ ಬೋಧನೆಗಳು ಬಹಳ ಸ್ಪಷ್ಟವಾಗಿ ಇವೆ. ಎಂತಹ ವಕ್ರತೆ ಅದರಲ್ಲಿ ಇಲ್ಲ. ಆದ್ದರಿಂದ ಚಿತ್ತಶುದ್ಧಿಯಿಂದ ಓದಿ. ಸತ್ಯವನ್ನು ಗ್ರಹಿಸಿ. ಅರ್ಥವಾಗದ ತತ್ತ್ವದ ಹಿಂದೆ ಬಿದ್ದು ಜೀವನವನ್ನು ಹಾಳು ಮಾಡುಕೊಳ್ಳಬೇಡಿ.

**ನಾವು :–** ಖುರಾನ್ ಬೋಧನೆಗಳಲ್ಲಿ ವಕ್ರತೆ ಇಲ್ಲ, ಆದರೇ ಮತವನ್ನು ನೆತ್ತಿಯ ಮೇಲಿಟ್ಟುಕೊಂಡು ಅದರ ಧ್ಯಾಸೆಯಲ್ಲಿ ಮಾತನಾಡುವವರಲ್ಲಿ ವಕ್ರತೆಇದೆ. ಖುರಾನ್ ಬಹಳ ಸ್ಪಷ್ಟವಾಗಿದೆಯೆಂದು ನಮಗೂ ಸಹ ತಿಳಿದಿದೆ. ಅದರಲ್ಲಿನ ಸ್ಪಷ್ಟತೆ ನಿಮಗೆ ತಿಳಿದಿದ್ದರೇ ಅಲ್ಲಾಹ್ ಒಂದು ಕಡೆ ಸೃಷ್ಠಿಯನ್ನು ತಯಾರು ಮಾಡುವುದಕ್ಕೆ ತಾನು ಆರು ದಿನಗಳು ಶ್ರಮಿಸಿ, ಏಳನೇ ದಿನ ವಿಶ್ರಾಂತಿ ತೆಗೆದುಕೊಂಡಿದ್ದಾನೆಂದು ಹೇಳಿದ್ದಾನೆ, ಮತ್ತೊಂದು ಕಡೆ ದೇವರು ಏನೂ ಮಾಡುವುದಿಲ್ಲ, ದೇವರು ಯಾವುದಾದರೂ ಅಂದುಕೊಂಡರೇ ಆಗಿಹೋಗುತ್ತದೆ ಎಂದಿದ್ದಾನೆ. ದೇವರು ಆರು ದಿನಗಳು ಕೆಲಸಮಾಡುವುದೆನ್ನುವುದು ನಿಜವಾ? ಏನೂ ಮಾಡುವುದಿಲ್ಲ ಆಗಿಹೋಗು ಎಂದರೇ ಆಗಿಹೋಗುವುದು ನಿಜವಾ? ನೀವು ವಿವರವಾಗಿ ಶಾಸ್ತ್ರಬದ್ಧವಾಗಿ ಹೇಳಬಲ್ಲಿರಾ? ಚಿತ್ತಶುದ್ಧಿಯಿಂದ ಓದಿರಿ, ಸತ್ಯವನ್ನು ಗ್ರಹಿಸಿರಿ ಎಂದು ಹೇಳಿದ್ದಾರಲ್ಲವೆ! ಈ ವಿಷಯದಲ್ಲಿ ನೀವು ಸತ್ಯವನ್ನು ಗ್ರಹಿಸಿದ್ದೀರಾ? ಅರ್ಥವಾಗದ ವಿಷಯಗಳ ಹಿಂದೆಬಿದ್ದು ಜೀವನವನ್ನು ಹಾಳು ಮಾಡಿಕೊಳ್ಳಬೇಡಿರೆಂದು ಸಹ ಸಲಹೆ ಹೇಳಿದ್ದಾರೆ. ನಿಮ್ಮ ಸಲಹೆಯ ಪ್ರಕಾರ ದೇವರು ಆರು ದಿನಗಳು ಸೃಷ್ಠಿಯನ್ನು ಅಥವಾ ಏನೂ ಮಾಡದ ವಿಧಾನ ಅರ್ಥವಾಗಲಿಲ್ಲವೆಂದು ಬಿಟ್ಟುಹಾಕೆನ್ನುತ್ತೀರಾ? ಚಿತ್ತ ಶುದ್ಧಿಯಿಂದ ಓದಿದರೇ ಸ್ಪಷ್ಟವಾಗಿ ಅರ್ಥವಾಗುತ್ತದೆಂದು ಹೇಳಿ, ಅರ್ಥವಾಗದ ವಿಷಯಗಳನ್ನು ಬಿಟ್ಟುಹಾಕೆನ್ನುವುದು ಸರಿಯೇನಾ?

ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ನನಗೆ ಅತ್ಯಂತ ಇಷ್ಟವಾದ ಸೂರಾ 112. ಅದರಲ್ಲಿ ನಾಲ್ಕು ಆಯತ್‌ಗಳು ಮಾತ್ರವೇ ಇವೆ. ನಾಲ್ಕು ಆಯತ್‌ಗಳು ದೇವರಿಗೆ ಹತ್ತಿರವಾಗಿ ಇರುವ ವಾಕ್ಯಗಳಾಗಿ ಇವೆ. ನಾವು ಮೊದಲೇ ಹೇಳಿದ್ದೇವೆ. ಖುರಾನ್‌ನಲ್ಲಿ ಅರ್ಥಕ್ಕೂ ಮೇಲಾಗಿ ಸೂಕ್ಷ್ಮ ಜ್ಞಾನದಿಂದ ತುಂಬಿರುವ ವಾಕ್ಯಗಳೇ ಇವೆ. ಆದರೂ ಬಹಳ ಕಡೆ ಎಷ್ಟೋ ವಿವರವಾಗಿ ಹೇಳುತ್ತಿದ್ದೇವೆ ಎಂದು ಸಹ ಹೇಳಿದ್ದಾರೆ. ಶ್ರದ್ಧ, ಬುದ್ಧಿ ಇರುವವರಿಗೆ ನನ್ನ ವಾಕ್ಯಗಳು ಅರ್ಥವಾಗುತ್ತವೆಂದು 3–7ರಲ್ಲಿಯೇ ಹೇಳಿದ್ದಾರೆ. ಆದರೇ ಆ ಮಾತನ್ನು ಯಾರೂ ಗಮನಿಸಲಿಲ್ಲ. ಈ ದಿನ ಬಹಳ ಮಂದಿ ಮುಸ್ಲಿಮ್ ಹಿರಿಯರು ವಕ್ರಬುದ್ಧಿ ಇರುವವರು ಈ ವಾಕ್ಯವನ್ನು ಅಡ್ಡ ಇಟ್ಟುಕೊಂಡು ಆ ವಾಕ್ಯಗಳ ತಂಟೆಗೆ ಹೋಗಬಾರದೆಂದು ಉಳಿದ ಮುಸ್ಲಿಮ್‌ರೆಲ್ಲರನ್ನೂ ಮಭ್ಯಪಿರಿಸುತ್ತಿದ್ದಾರೆ. ಆ ವಾಕ್ಯಗಳ ಅವಶ್ಯ ಇಲ್ಲದೇ ಹೋದರೇ ಅವುಗಳನ್ನು ಖುರಾನ್ ಗ್ರಂಥದಲ್ಲಿ ಹೇಳಬೇಕಾದ ಅವಶ್ಯವೇ ಇಲ್ಲವಲ್ಲವೆ! ದೇವರ ಮೇಲೆ ಶ್ರದ್ಧೆಯಿಂದ ಬುದ್ಧಿಯನ್ನು ಉಪಯೋಗಿಸಿ ನೋಡಿದರೇ ಅವನ ಶ್ರದ್ಧೆಯನ್ನನು ಸರಿಸಿ ಅವನ ಬುದ್ಧಿಗೆ ದೇವರು ಜ್ಞಾನ ಅರ್ಥವಾಗುವಂತೆ ಮಾಡುವನು. ಶ್ರದ್ಧೆ ಇಲ್ಲದವನ ಬುದ್ಧಿಗೆ ಜ್ಞಾನ ಅರ್ಥವಾಗುವುದಿಲ್ಲ. ದೇವರ ಮೇಲೆ ವಿಶ್ವಾಸವಿರುವವರಿಗೆ ದೇವರೆಂಬ ಭಕ್ತಿ ಇರುತ್ತದೆ. ವಿಶ್ವಾಸ ಎಂದರೆ ದೇವರಿದ್ದಾನೆಂಬ ನಂಬಿಕೆ, ದೇವರು ಒಬ್ಬನೇ ಎಂಬ ನಂಬಿಕೆ, ದೇವರ ಜ್ಞಾನ ತಿಳಿಯುವುದಕ್ಕೆ ವಿಶ್ವಾಸ ಅಗತ್ಯವಿಲ್ಲ. **"ಶ್ರದ್ಧಾವಾನ್ ಲಭತೇ ಜ್ಞಾನಂ"** ಎಂಬ ಭಗವದ್ಗೀತೆ ವಾಕ್ಯದ ಪ್ರಕಾರ ಶ್ರದ್ಧೆಯಿರುವವನಿಗೆ ದೇವರ ಜ್ಞಾನ ಲಭಿಸುತ್ತದೆ. ಆದರೆ ಮುಸ್ಲಿಮ್‌ರಿಗೂ ದೇವರ ಮೇಲೆ ವಿಶ್ವಾಸವಿದೆಯಾಗಲೀ, ಶ್ರದ್ಧೆಯಿಲ್ಲ. ಶ್ರದ್ಧೆ ಇಲ್ಲದಿರುವುದರಿಂದಲೇ ಅರ್ಥವಾಗದ ವಿಷಯಗಳ ಹಿಂದೆ ಬೀಳದಂತೆ ಅವುಗಳನ್ನು ಬಿಟ್ಟುಹಾಕೆಂದು ಅಂದಿದ್ದಾರೆ. ಜ್ಞಾನವನ್ನು ತಿಳಿದುಕೊಳ್ಳಬೇಕೆಂಬ ಶ್ರದ್ಧೆಯಿರುವವರು ಹಾಗೆ ಅನ್ನುವುದಿಲ್ಲ ಅಲ್ಲವೆ!

ಮುಖ್ಯವಾಗಿ ಹೇಳುವುದೇನೆಂದರೇ ವಿಶ್ವಾಸದಿಂದ ದೇವರ ಮೇಲೆ ಭಕ್ತಿ ಏರ್ಪಟಾಗುತ್ತದೆ. ಭಕ್ತಿ, ವಿಶ್ವಾಸ ಎರಡೂ ಒಂದು ವರ್ಗಕ್ಕೆ ಸೇರಿರುವವು.

ಶ್ರದ್ಧೆ ಇರುವವನಿಗೆ ಜ್ಞಾನ ಉಂಟಾಗುತ್ತದೆ. ಶ್ರದ್ಧೆ, ಜ್ಞಾನಗಳು ಎರಡೂ ಒಂದು ವರ್ಗಕ್ಕೆ ಸೇರಿರುವವೆಂದು ಹೇಳಬಹುದು. ಮುಸ್ಲಿಮ್‌ರಿಗೆ ದೇವರ ಮೇಲೆ ವಿಶ್ವಾಸ ನೂರಕ್ಕೆ ನೂರು ಪಾಲು ಇದೆ ಆದರೆ, ದೇವರ ಮೇಲೆ ಶ್ರದ್ಧೆ, ದೇವರ ಜ್ಞಾನದ ಮೇಲೆ ಶ್ರದ್ಧೆ ಬಹಳ ಕಡಿಮೆ. ಆದ್ದರಿಂದ ದೇವರ ಜ್ಞಾನ ಖುರ್‌ಆನ್ ಗ್ರಂಥದಲ್ಲಿ ಸಂಪೂರ್ಣವಾಗಿ ಇದ್ದರೂ, ಅದು ಅವರಿಗೆ ಅರ್ಥವಾಗಲಿಲ್ಲ. ಅವರು ಗ್ರಂಥವನ್ನು ಓದಿದರೂ, ಜ್ಞಾನವೆಲ್ಲವೂ ತಪ್ಪು ಭಾವದಲ್ಲಿ ಅರ್ಥವಾಗುವುದೇ ಅಲ್ಲದೇ, ಯಾರು ಹೇಳಿದರೂ ಕೇಳದಂತೆ ಮಾಡಿ ತಮಗೆ ತಿಳಿದ ಜ್ಞಾನವೇ ಸರಿಯಾಗಿರುವುದೆಂದು ಅನಿಸುತ್ತದೆ. ಆದ್ದರಿಂದ ಅವರಿಗೆ ದೇವರೇ ಇಳಿದು ಬಂದು ಹೇಳಿದರೂ ಒಪ್ಪಿಕೊಳ್ಳುವುದಿಲ್ಲ. ಮೇಲಾಗಿ ನಮ್ಮ ಜ್ಞಾನ ನಿನಗೆ ತಿಳಿಯದೆಂದು ದೇವರಿಗೂ ಸಹ ಬದಲು ಹೇಳುವರಾಗಲೀ ಎದುರಿಗಿರುವವನು ಎಂತಹವನೋ ಎಂದು ಸ್ವಲ್ಪವೂ ಆಲೋಚಿಸುವುದಿಲ್ಲ.

ದೇವರ ಮೇಲೆ ವಿಶ್ವಾಸ ಭಕ್ತಿಯನ್ನು ಬೆಳೆಸುತ್ತದೆ, ಹಾಗೇ ದೇವರ ಮೇಲೆ ಶ್ರದ್ಧೆ ಜ್ಞಾನನವನ್ನು ಬೆಳಸುತ್ತದೆ. ಮುಸ್ಲಿಮ್‌ರಿಗೆ ವಿಶ್ವಾಸವಿರುವುದರಿಂದ ಎಲ್ಲರಿಗಿಂತ ದೇವರ ಮೇಲೆ ಭಕ್ತಿ ಹೆಚ್ಚಾಗಿ ಇರುತ್ತದೆ. ಆದ್ದರಿಂದ ಉಳಿದ ಮತದವರು ಯಾರೂ ಪ್ರಾರ್ಥನೆ ಮಾಡದ ವಿಧವಾಗಿ ಪ್ರತಿ ದಿನ ಐದು ಬಾರಿ ಪ್ರಾರ್ಥನೆ (ನಮಾಜ್) ಮಾಡುವ ಮುಸ್ಲಿಮ್‌ರು ಇದ್ದಾರೆ. ಆದರೇ ಖುರಾನ್ ಗ್ರಂಥವನ್ನು ಅವರು ಎಷ್ಟು ಗೌರವಪ್ರದವಾಗಿ ನೋಡಿಕೊಂಡರೂ, ಅವರಿಗೆ ಅದರಲ್ಲಿನ ಜ್ಞಾನ ಅರ್ಥವಾಗಲಿಲ್ಲ ಎನ್ನುವುದಕ್ಕೆ ನಿರೂಪಣೆಯಾಗಿ ಒಂದು ವಿಷಯವನ್ನು ನೋಡೋಣ. ನನಗಿಷ್ಟವಾದ ಸೂರಾ 112 ಎಂದು ಹೇಳಿದ್ದೀನಲ್ಲವೆ! ಅದರಲ್ಲಿಯೇ **"ಆತನಿಗೆ ಸಂತಾನವಿಲ್ಲ"** ಎಂಬ ವಾಕ್ಯವಿದೆ. ಆ ಮಾತು ವಾಸ್ತವವೇ, ಆದರೂ ಅದೇ ಗ್ರಂಥದಲ್ಲೇ ಸೂರಾ 6 ಆಯತ್ 101ರಲ್ಲಿ ಹೀಗೆ ಇದೆ. **(6–101) "ಆಕಾಶವನ್ನು, ಭೂಮಿಯನ್ನು ತಯಾರು ಮಾಡಿದವನು ಆತನೇ. ದೇವರಿಗೆ ಹೆಂಡತಿಯೇ ಇಲ್ಲದಿರುವಾಗ ಸಂತಾನ ಹೇಗೆ ಕಲುಗುತ್ತದೆ? ಆತನು ಪ್ರತಿ ವಸ್ತುವನ್ನು ಸೃಷ್ಟಿಸಿದ್ದಾನೆ. ಹಾಗೇ ಪ್ರತಿ ಜೀವರಾಶಿಯನ್ನು ಸೃಷ್ಟಿಸಿದ್ದಾನೆ. ಆತನಿಗೆ ಪ್ರತಿಯೊಂದು ಚೆನ್ನಾಗಿ ತಿಳಿದಿದೆ"**. ಈ ವಾಕ್ಯದಲ್ಲಿ ಆತನು

ಪ್ರತಿ ಜೀವರಾಶಿಯನ್ನು ಸೃಷ್ಟಿಸಿದಾಗ ಆತನಿಗೆ ಹೆಂಡತಿ ಇಲ್ಲದೇ ಹೋದರೇ ಸಂತಾನ ಹೇಗೆ ಉಂಟಾಗುತ್ತದೆಂದು, ತಾನು ಹುಟ್ಟಿಸಿದ ಜೀವರಾಶಿಗಳನ್ನು ದೇವರ ಸಂತಾನವಾಗಿ ಹೇಳುತ್ತಾ, ಹೆಂಡತಿ ಇಲ್ಲದಿರುವಾಗ ಸಂತಾನ ಹೇಗೆ ಕಲುಗುತ್ತದೆಂದು ಪ್ರಶ್ನಿಸಿದ್ದಾನೆ. ಆದರೇ 112ನೇ ಸೂರಾದಲ್ಲಿ "ಆತನಿಗೆ ಸಂತತಿ ಇಲ್ಲ", ಭಾಗಸ್ವಾಮಿಯಾದ ಹೆಂಡತಿ ಇಲ್ಲವೆಂದು ಹೇಳಿದ್ದೀರ ಎಂದು ಕೇಳಿದರೆ ಅದಕ್ಕೆ ಉತ್ತರ ಹೇಳದಂತೆ ಇರುವುದಲ್ಲದೆ, ಅದು ಅಷ್ಟೇ! ಅಲ್ಲಾ ಹೇಳಿರುವುದನ್ನು ಕೇಳಬೇಕೇ ಹೊರತು ಪ್ರಶ್ನಿಸಬಾರದು ಎಂದು ಹೇಳುತ್ತಿದ್ದಾರೆ. ಇಲ್ಲಿ ಅವರ ಹತ್ತಿರ ಸಮಾಧಾನ ಇಲ್ಲವೆಂದು ಸುಲಭವಾಗಿ ತಿಳಿದುಹೋಗುತ್ತದೆ. ಅಷ್ಟೇ ಅಲ್ಲದೇ ಈ ಆಯತ್‌ಗಳಿಗೆ ಸಂಬಂಧಿಸಿದ ಜ್ಞಾನ ಅವರ ಹತ್ತಿರ ಇಲ್ಲವೆಂದು ಅರ್ಥವಾಗುತ್ತದೆ. ಇದೆಲ್ಲದಕ್ಕೂ ಕಾರಣ ಅವರಿಗೆ ದೇವರ ಜ್ಞಾನದ ಮೇಲೆ ಶ್ರದ್ಧೆ ಇಲ್ಲದೇ ಹೋಗುವುದೇ ಎಂದು ತಿಳಿಯುತ್ತದೆ. ಆದರೇ ಅವರು ತಮ್ಮ ಹತ್ತಿರ ಜ್ಞಾನ ಇಲ್ಲವೆಂಬ ಭಾವ ಇಲ್ಲದೇ, ತಾವು ಸಂಪೂರ್ಣ ಜ್ಞಾನಿಗಳೆಂದೇ ಅಂದುಕೊಳ್ಳುತ್ತಾ ಇತರರನ್ನು ವಿಮರ್ಶಿಸುತ್ತಿದ್ದಾರೆ. ಆದರೇ ದೇವರು ಎಲ್ಲವನ್ನೂ ಗಮನಿಸುತ್ತಿದ್ದಾನೆ.

**ಖಾದಿರ್ :–** ನೀವೇಕೆ ದಿವ್ಯ ಖುರಾನ್ ವಾಕ್ಯಗಳನ್ನು ವಕ್ರೀಕರಿಸುತ್ತಾ ಬೋಧಿಸುತ್ತಿದ್ದೀರ?

**ನಾವು :–** ನಾವು ಖುರಾನ್ ವಾಕ್ಯಗಳನ್ನು ಗೌರವಿಸುತ್ತಿದ್ದೇವೆ. ಖುರಾನ್ ಸಮಸ್ತ ಮನುಷ್ಯರಿಗೂ ಹೇಳಿದ ಗ್ರಂಥವಾದ್ದರಿಂದ ಅದರಮೇಲೆ ನಿಮಗೆ ಎಷ್ಟು ಹಕ್ಕು ಇದೆಯೋ ನಮಗೂ ಸಹ ಅಷ್ಟೇ ಹಕ್ಕು ಇದೆ. ಅಲ್ಲಾ ಎಲ್ಲರಿಗೂ ದೈವವೇ. ದೈವಗ್ರಂಥವಾದ ಖುರಾನ್ ಸಹ ಎಲ್ಲರ ಗ್ರಂಥವೇ. ಖುರಾನ್ ಒಂದು ಮತಕ್ಕೆ ಸಂಬಂಧಿಸಿರುವುದು ಅಲ್ಲ. ಮೂರು ಮತದವರಿಗೂ **"ಹಿತಬೋಧಿನಿ"** ಎಂದು ನೆನಪಿಟ್ಟುಕೊಳ್ಳಿ.

**ಖಾದಿರ್ :–** ನೀವು ದಿವ್ಯ ಖುರಾನ್ ಸಂದೇಶವನ್ನು ಅರ್ಥ ಮಾಡಿಕೊಂಡಿದ್ದರೇ ವಿಗ್ರಹಗಳು ಪ್ರತಿಷ್ಠಿಸುವವರಲ್ಲ ಅಲ್ಲವೆ.

**ನಾವು :–** ನಾವು ಖುರಾನ್ ಜ್ಞಾನ ಎಲ್ಲಿ ತಪ್ಪು ಭಾವಕ್ಕೆ ಒಳಗಾಗುತ್ತದೋ ಅಲ್ಲಿ ಅದನ್ನು ಸರಿಮಾಡುತ್ತಿದ್ದೇವೆ. ನಿಜ ಭಾವವನ್ನು ತಿಳಿಸುತ್ತಿದ್ದೇವೆ. ನಾವು ಅಸಲಾಸದ ದೇವರು ಒಬ್ಬನೇಯೆಂದೂ, ಆತನು ಒಬ್ಬನೇ ಸೃಷ್ಠಿಗೆಲ್ಲಾ ಅಧಿಪತಿ ಮತ್ತು ಅಧಿಕಾರಿಯೆಂದು ಹೇಳುತ್ತಿದ್ದೇವೆ. ನಾವು ವಿಗ್ರಹಗಳನ್ನು ಪ್ರತಿಷ್ಠಿಸಲಿಲ್ಲ. ನಾವು ಪ್ರತಿಷ್ಠಿಸಿರುವುದು ಶ್ರೀಕೃಷ್ಣ ಪ್ರತಿಮೆಯನ್ನು ಒಂದನ್ನೇ. ಆತನು ಭಗವಂತನಾದ್ದರಿಂದ ಆ ಕೆಲಸ ಮಾಡಬೇಕಾಯಿತು. ಗ್ರಹ ಎಂದರೇ ದೆವ್ವ ಎಂದು ಅರ್ಥ. ವಿಗ್ರಹ ಎಂದರೆ ದೊಡ್ಡ ದೆವ್ವ ಅಥವಾ ವಿಶೇಷವಾದ ದೆವ್ವ ಎಂದು ಅರ್ಥ. ನಾವು ದೆವ್ವಗಳನ್ನು ಪೂಜಿಸುವವರಲ್ಲ.

**ಖಾದಿರ್ :–** ನೀವು ಇಟ್ಟುಕೊಂಡ ನಾಮಗಳು ದೇವರ ಗುರುತು ಎಂದಿದ್ದೀರ. ನಾಮಗಳು ಇಟ್ಟುಕೊಳ್ಳಿರೆಂದು ಖುರ್‌ಆನ್‌ನಲ್ಲಿ ಯಾವ ವಾಕ್ಯದಲ್ಲಿದೆಯೋ ತೋರಿಸಬಲ್ಲಿರಾ?

**ನಾವು :–** ನಾವು ನಾಮಗಳು ಇಟ್ಟುಕೊಂಡಿಲ್ಲ. ದೇವರ ಚಿಹ್ನೆಯನ್ನು ಇಟ್ಟುಕೊಂಡಿದ್ದೇವೆ. ನಾವು ಇಟ್ಟುಕೊಂಡಿರುವವು ನಾಲ್ಕು ಚಕ್ರಗಳು. ನಾಲ್ಕು ಚಕ್ರಗಳ ಗುರುತಿಗೆ ಖುರ್‌ಆನ್ ಗ್ರಂಥದಲ್ಲಿ ವಿಶೇಷವಾದ ಅರ್ಥವಿದೆ. ಅದೇ ವಿಷಯವನ್ನೇ ಈ ಗ್ರಂಥದಲ್ಲಿ ಬರೆದಿದ್ದೇವೆ. ಕಟ್ಟಿದರೂ, ಹೊಡೆದರೂ, ತಂದರೂ ಎಂಬ ಮೂರು ಮಾತುಗಳಲ್ಲಿ ರಾಮಾಯಣ ಸಾರಾಂಶವನ್ನು ಹೇಳಿದಂತೆ ದೇವರ ಜ್ಞಾನ ಸಾರಾಂಶವೆಲ್ಲವೂ ಕ್ಲುಪ್ತವಾಗಿ ಮಿಳಿತ ಮಾಡಿ ತೋರಿಸುವುದೆ ನಾಲ್ಕು ಚಕ್ರಗಳ ಗುರುತು, ದೇವರ ಜ್ಞಾನದಿಂದ ಕೂಡಿಕೊಂಡಿರುವುದರಿಂದ ಈ ನಾಲ್ಕು ಚಕ್ರಗಳನ್ನು **"ದೇವರ ಚಿಹ್ನೆ ಅಥವಾ ದೇವರ ಗುರುತು"** ಎಂದು ಹೇಳುತ್ತಿದ್ದೇವೆ. ದೇವರ ಗುರುತನ್ನು ಗೌರವಿಸೆಂದು ಸೂರಾ 22 ಆಯತ್ 32ರಲ್ಲಿ ಇದೆ ನೋಡಿರಿ. **(22–32) "ಅಲ್ಲಾಹ್ ಚಿಹ್ನೆಗಳನ್ನು ಯಾರಾದರೂ ಗೌರವಿಸುತ್ತಿದ್ದಾರೆಂದರೇ, ಅದು ಅವರ ಹೃದಯಗಳಲ್ಲಿನ ಭಕ್ತಿ ಭಾವದಿಂದಲೇ" ಅಷ್ಟೇ ಅಲ್ಲದೆ (5–2) "ವಿಶ್ವಾಸಿಸಿದ ಓ ಪ್ರಜೆಗಳೆ! ಅಲ್ಲಾಹ್ ಚಿಹ್ನೆಗಳನ್ನಾಗಲೀ, ನಿಷಿದ್ಧ ಮಾಸವನ್ನಾಗಲೀ ಅಗೌರವಪಡಿಸಬೇಡಿ"** ಎಂದು ಇದೆ. ಅಲ್ಲಾಹ್

ಚಿಹ್ನೆಗಳನ್ನು ಗೌರವಪಡಿಸುವುದು ಎಂದರೇ ಅವುಗಳನ್ನು ಉನ್ನತ ಸ್ಥಾನದಲ್ಲಿ ಇಟ್ಟುಕೊಳ್ಳುವುದೇ. ಅದಕ್ಕಿಂತ ಗೌರವವೇನಿರುತ್ತದೆ. ಹಾಗೆಯೇ ಬೈಬಲ್ ಪ್ರಕಟಣೆ ಗ್ರಂಥ 9ನೇ ಅಧ್ಯಾಯ 4ನೇ ವಾಕ್ಯದಲ್ಲಿ "**ಹಣೆಯಮೇಲೆ ದೇವರ ಮುದ್ರೆ ಇಲ್ಲದ ಮನುಷ್ಯರಿಗೇ ಹೊರತು ಭೂಮಿ ಮೇಲಿರುವ ಹುಲ್ಲಿಗಾದರೂ ಯಾವ ಸಸಿಗಳಿಗಾದರೂ ಮತ್ತು ಯಾವ ವೃಕ್ಷಕ್ಕಾದರೂ ಹಾನಿ ಉಂಟು ಮಾಡಬಾರದೆಂದು ಅವರಿಗೆ (ದೇವದೂತರಿಗೆ) ಆಜ್ಞೆ ಕೊಡಲಾಗಿದೆ. 5) ಮತ್ತು ಅವರನ್ನು ಸಾಯಿಸುವುದಕ್ಕೆ ಅಧಿಕಾರ ಕೊಡಲಾಗಲಿಲ್ಲ. ಆದರೆ ಐದು ತಿಂಗಳವರೆಗು ಬಾಧಿಸುವುದಕ್ಕೆ ಅಧಿಕಾರ ಕೊಡಲಾಗಿದೆ. ಅವುಗಳಿಂದ ಉಂಟಾಗುವ ಬಾಧೆ, ಚೇಳು ಮನುಷ್ಯನನ್ನು ಕಚ್ಚಿದಾಗ ಇರುವ ಬಾಧೆಯಹಾಗೆ ಇರುತ್ತದೆ. 6) ಆ ದಿನಗಳಲ್ಲಿ ಮನುಷ್ಯರು ಮರಣವನ್ನು ಹುಡುಕುವರು ಆದರೆ ಅದು ಅವರಿಗೆ ಸಿಗುವುದೇ ಇಲ್ಲ; ಸಾಯಬೇಕೆಂದು ಆಸೆಪಡುತ್ತಾರೆ ಆದರೆ ಮರಣ ಅವರ ಹತ್ತಿರದಿಂದ ಓಡಿಹೋಗುತ್ತದೆ.**"

**ಖಾದಿರ್ :–** ಖುರಾನ್‌ನಲ್ಲಿ ಮರಣಾನಂತರ ದೈವ ನ್ಯಾಯಸ್ಥಾನದಲ್ಲಿ ಕರ್ಮಗಳ ಕುರಿತು ಪ್ರಶ್ನಿಸುವುದು ನಡೆಯುತ್ತದೆಂದು ಇದೆ. ನೀವೇನೊ ಪುನರ್ಜನ್ಮ ಸಿದ್ಧಾಂತವನ್ನು ಪ್ರಚಾರ ಮಾಡುತ್ತಿದ್ದೀರ.

**ನಾವು :–** ಮರಣಾನಂತರ ದೈವ ನ್ಯಾಯಸ್ಥಾನವಿರುವುದು ನಿಜವೇ ಆದರೆ ಅಲ್ಲಿ ಪ್ರಶ್ನಿಸುವುದು, ಕೇಳುವುದು ಇರುವುದಿಲ್ಲ. ಯಾರು ಮಾಡಿಕೊಂಡ ಕರ್ಮಕ್ಕೆ ಅವನ ಫಲಿತವನ್ನು ನಿರ್ಣಯಿಸಿ ಕಳುಹಿಸುವುದು ಹೊರತು ನಾವು ಕೇಳುವುದಂತೂ ಏನೂ ಇರುವುದಿಲ್ಲ. ಸತ್ತವನು ಏನು ಹೇಳಿದರೂ ಕೇಳುವವನು ಇರುವುದಿಲ್ಲ. ಅವನು ಹೇಳಿಕೊಳ್ಳುವ ಅವಕಾಶವೇ ಇರುವುದಿಲ್ಲ. ಸತ್ತುಹೋದ ಕೂಡಲೇ ಅವನ ಕರ್ಮಫಲವನ್ನು ಒಂದು ಕ್ಷಣದಲ್ಲಿ ಹತ್ತರಷ್ಟು ಕಾಲದಲ್ಲಿ ನಿರ್ಣಯಿಸುವುದು ನಡೆದುಹೋಗುತ್ತದೆ. ಅದೇ ಕ್ಷಣದಲ್ಲೇ ಅವನು ಪುನಃ ಜನ್ಮಿಸುವನು. ಆಲಸ್ಯ ಎಂಬ ಮಾತು, ವಿಶ್ರಾಂತಿ ಎಂಬ ಮಾತು ಇಲ್ಲ. ಈ ವಿಷಯ ನಿಮಗೆ ಹೊಸದಾಗಿ ಇದ್ದರೂ ಇದು ಅಕ್ಷರ ಸತ್ಯ.

**ಖಾದಿರ್ :–** ನೀವು ಯಾರು?

**ನಾವು :–** ನೀವು ನನ್ನನ್ನು ಯಾರೆಂದು ಅಂದುಕೊಳ್ಳುತ್ತಿದ್ದೀರೋ ನಾವು ಅವರೇ.

**ಖಾದಿರ್ :–** ನಿಮ್ಮ ವಿಶ್ವಾಸಗಳು ಯಾವುವು?

**ನಾವು :–** ನಮಗೆ ವಿಶ್ವಾಸಗಳು ಇರುವುದಿಲ್ಲ. ನಮಗಿರುವುದು ಒಂದೇ ಒಂದು ದೇವರ ಜ್ಞಾನ ಮತ್ತು ಅದರ ಮೇಲೆ ಶ್ರದ್ಧೆ.

**ಖಾದಿರ್ :–** ನೀವು ಯಾವ ಗ್ರಂಥವನ್ನು ನಂಬುತ್ತೀರಾ?

**ನಾವು :–** ದೈವಗ್ರಂಥಗಾಳದ ಭಗವದ್ಗೀತೆ, ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳು, ಖುರ್‌ಆನ್‌ನಲ್ಲಿ ದೇವರ ವಾಕ್ಯಗಳನ್ನು ನಂಬುತ್ತೇವೆ.

**ಖಾದಿರ್ :–** ಎಲ್ಲಾ ಅಯೋಮಯವಾಗಿ ಇದೆ! ವಾಸ್ತವಗಳನ್ನು ನಂಬುವವರು ಮಾತುಗಳಿಂದ ಜನರನ್ನು ಅಯೋಮಯದಲ್ಲಿ ಬೀಳಿಸುವುದಿಲ್ಲ.

**ನಾವು :–** ವಾಸ್ತವವನ್ನು ಹೇಳಬೇಕೆಂದರೇ ನಾನು ನಿಮ್ಮನ್ನು ಅಯೋಮಯದಲ್ಲಿ ಬೀಳಿಸುವುದಕ್ಕಾಗಿಯೇ ಬಂದಿದ್ದೇನೆ. ಅಂದಿಗಾದರೂ ನಿಜ ದೈವಜ್ಞಾನವನ್ನು ತಿಳಿದುಕೊಳ್ಳುತ್ತೀರ.

**ಪ್ರಶ್ನೆ :–** "ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಖ್ಯಗಳು" ಎಂಬ ಗ್ರಂಥದ ಮೇಲೆ ಮುಸ್ಲಿಮ್‌ರ ವ್ಯಕ್ತಿ ಫೋಟೋವನ್ನು ಹೇಗೆ ಹಾಕಿದ್ದೀರ? ಅದು ನಮಗೆ ಅಭ್ಯಂತರಕರ.

**ಉತ್ತರ :–** ದೇವರ ಮೇಲೆ ವಿಶ್ವಾಸವಿರುವವನನ್ನು 'ಮುಸ್ಲಿಮ್' ಎನ್ನುತ್ತೇವೆ. ಅಷ್ಟೇ ಆಗಲೀ ದೇವರ ಜ್ಞಾನದ ಹತ್ತಿರ ಮತವಿರುವುದಿಲ್ಲ. ನಾನು ಮುಸ್ಲಿಮ್ ಮತಸ್ಥನಲ್ಲ, ನಾನು ಮತದಲ್ಲಿ ಹಿಂದೂನೇ ಆದರೂ ವಿಶ್ವಾಸದಲ್ಲಿ ಗಟ್ಟಿ ಮುಸ್ಲಿಮ್ ಹಾಗೆ ಇದ್ದೇನೆ ಅಲ್ಲವೆನ್ನುತ್ತೀರಾ? ನಾನು **"ಅಂತಿಯ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂಬ ಗ್ರಂಥವನ್ನು ಮುಸ್ಲಿಮ್ ಮತಸ್ಥರಿಗಾಗಿ ಬರೆಯಲಿಲ್ಲ. ಹಿಂದೂಗಳು ಓದಬೇಕೆಂದು ಖುರಾನ್‌ನಲ್ಲಿನ ವಿಶೇಷತೆಯನ್ನು ತಿಳಿಯಬೇಕೆಂಬ ಉದ್ದೇಶದಿಂದ ಬರೆದಿದ್ದೇವೆ. ಗ್ರಂಥದ ಮೇಲೆ ನಮ್ಮ ಫೋಟೋ ಇರುವುದರಿಂದ ನನ್ನ ಮೇಲೆ ಅಭಿಮಾನದಿಂದ, ಗೌರವದಿಂದ ಕನಿಷ್ಟ ಹತ್ತುಸಾವಿರ ಮಂದಿ

ಹಿಂದೂಗಳು ಗ್ರಂಥವನ್ನು ಓದಿದ್ದಾರೆ. ಓದಿದ ನಂತರ ಖುರ್‌ಆನ್‌ನಲ್ಲಿ ಇಷ್ಟುದೊಡ್ಡ ಜ್ಞಾನವಿದೆಯಾ! ಎಂದು ಆಶ್ಚರ್ಯಪಟ್ಟಿದ್ದಾರೆ. ನನ್ನ ಚಿತ್ರದಿಂದ ಇನ್ನೂ ಹತ್ತುಸಾವಿರ ಮಂದಿ ಹಿಂದೂಗಳು "ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು" ಎಂಬ ಗ್ರಂಥವನ್ನು ಓದಬಲ್ಲರು ಹಾಗೆ ಓದುವುದಕ್ಕೆ ನಿಮಗೆ ಅಭ್ಯಂತರವಾ?

**ಪ್ರಶ್ನೆ :–** ನೀವು ಮುಸ್ಲಿಮ್ ಗ್ರಂಥಗಳನ್ನು ಬರೆಯುವುದು ಸಂತೋಷವೇ, ಆದರೇ ಮುಸ್ಲಿಮ್ ಪಂಡಿತರ ಪರ್ಮಿಷನ್ ತೆಗೆದುಕೊಂಡು ಬರೆಯಬೇಕು?

**ಉತ್ತರ :–** ಇದೇನಾದರೂ ನಿಮ್ಮ ಪ್ರಾಪಂಚಿಕ ಧನವಾ ಇಲ್ಲವೆ ನಿಮ್ಮ ಪ್ರಪಂಚ ಆಸ್ತಿಯಾ! ಇಲ್ಲದೇ ಹೋದರೇ ಯಾವ ದೇವರಾದರೂ ನಿಮಗೆ ಪಟ್ಟಾ ಮಾಡಿ ಕೊಟ್ಟಿದ್ದಾನಾ? ಖುರಾನ್ ಗ್ರಂಥ ದೇವರ ಗ್ರಂಥ ಅದು ಪ್ರಜೆಗಳ ಎಲ್ಲರ ಸೊತ್ತು. ಯಾರು ಯಾರನ್ನು ಕೇಳಬೇಕಾದ ಕೆಲಸವಿಲ್ಲ. ನಾವು ಮಾಡುವ ಒಳ್ಳೆಯ ಕೆಲಸಕ್ಕೆ ಸಂತೋಷಪಡಬೇಕೆ ಹೊರತು, ಅಪ್ಪಣೆ ತೆಗೆದುಕೊಂಡಿದ್ದೀರಾ ಎಂದು ಕೇಳುವುದೇನು? ಪಂಡಿತರು ಯಾರೋ ಹೇಳಿ. ಆಗ ಅವರ ಪರ್ಮಿಷನ್ ತೆಗೆದುಕೊಳ್ಳುತ್ತೇವೆ. ದೈವಜ್ಞಾನ ಸಮುದ್ರವಂತಹದು ಪ್ರಪಂಚ ವಿಷಯಗಳಲ್ಲಿ ಪಂಡಿತರಿರಬಹುದಾಗಲೀ, ದೈವಜ್ಞಾನದಲ್ಲಿ ದೇವರೇ ಪಂಡಿತನು. ಪಂಡಿತರಿಗೆ ಪಂಡಿತನಾದ ದೇವರೇ ಏನೂ ತಿಳಿಯದ ನಮ್ಮಿಂದ ಅದನ್ನು ಬರೆಸಿದ್ದಾನೆ. ನಿಮಗೆ ಕೈಲಾದರೇ ಹಾಗೆ ಏಕೆ ನಮ್ಮ ಪರ್ಮಿಷನ್ ಇಲ್ಲದಂತೆ ಬರೆಸಿದ್ದೀಯೆಂದು ಕೇಳಿ. ಹಣ ನಿನ್ನ ಸ್ವಂತವಾದರೂ ಫೈನಾನ್ಸ್ ಮಿನಿಷ್ಟರನ್ನು ಕೇಳಿ ಖರ್ಚು ಮಾಡುತ್ತೀಯಾ? ಅದು ಹೇಗೆ ಇಲ್ಲವೋ ಇದೂ ಸಹ ಹಾಗೇ ಅವಶ್ಯವಿಲ್ಲ. ಮತ ಎಂಬ ಹುಚ್ಚನ್ನು ಬಿಟ್ಟು ಎಲ್ಲರಿಗೂ ದೇವರು ಅಧಿಕಾರಿಯೆಂದೂ, ಎಲ್ಲರೂ ಆತನ ಆಧೀನದಲ್ಲಿರುವವರೇ ಎಂದು ಮರೆಯಬಾರದು.

**ಪ್ರಶ್ನೆ :–** "ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು" ಎಂಬ ಗ್ರಂಥದಲ್ಲಿ ಕೊನೆಯ ಪುಟಗಳಲ್ಲಿ ಪರದಾವೊಂದರ ವಿವರಣೆಯಲ್ಲಿ ಪರದಾ ತೆಗೆದುಹಾಕೆನ್ನುವಂತೆ ಇದೆ?

**ಉತ್ತರ :–** ನಮ್ಮ ಗ್ರಂಥದಲ್ಲಿ 'ಪರದಾ' ಹೇಗೆ ಬಂದಿದೆಯೋ, ಯಾವಾಗ ಬಂದಿದೆಯೋ, ಎಲ್ಲಿ ಬಂದಿದೆಯೋ ಹೇಳಿದ್ದೇವಾಗಲೀ, ತೆಗೆದುಹಾಕೆಂದು ನಾವು ಹೇಗೆ ಹೇಳಬಲ್ಲೆವು. ಅದು ನಿಮ್ಮ ಸಮಾಜಕ್ಕೆ ದೇವರು ಕೊಟ್ಟಿರುವ 'ರಕ್ಷೆ' ಆಗಬಹುದು ಇಲ್ಲವೆ 'ಶಿಕ್ಷೆ' ಆಗಬಹುದು. ದೇವರು ಕೊಟ್ಟಿರುವುದು ಯಾವುದನ್ನಾದರೂ ಬೇಡವೆನ್ನಬಾರದಲ್ಲವೆ!

**ಪ್ರಶ್ನೆ :– "ಖುರಾನ್‌ನಲ್ಲಿ ಆಣಿಮುತ್ಯಗಳು"** ಎಂಬ ಗ್ರಂಥ ಹಿಂದುಗಡೆ ಮೂರು ಮತಗಳ ಗುರುತುಗಳಿರುವ ಬೇರೆ ಗ್ರಂಥದ ಫೋಟೋ ಇದೆ. ನಮ್ಮ ಮನೆಯಲ್ಲಿ ಅದನ್ನು ನೋಡುತ್ತಲೇ "ಓಂ" ಗೊಂಬೆ ಇರುವ ಕಾಗದವನ್ನೂ ಸಹ ನಮ್ಮ ಮನೆಯೊಳಗೆ ಬರಬಾರದೆಂದು ಹಾಗೆ ಬಂದರೇ ಅಲ್ಲಾಗೆ ಕೋಪ ಬರುತ್ತದೆಂದು ಅಂದಿದ್ದಾರೆ ನಿಜವೆನಾ? ದೇವರನ್ನು 'ಅಲ್ಲಾಹ್' ಎಂದೇ ಅನ್ನಬೇಕು 'ದೇವರು' ಎಂದು ಅನ್ನಬಾರದೆಂದಿದ್ದಾರೆ, ದೇವರನ್ನು 'ಅಲ್ಲಾಹ್' ಎಂದೇ ಏಕೆ ಅನ್ನಬೇಕು? ನನ್ನ ವಯಸ್ಸು 16 ಸಂವತ್ಸರಗಳು, ನನಗೆ ಏನೂ ತಿಳಿಯದು. ದಯವಿಟ್ಟು ಹೇಳಿ?

**ಉತ್ತರ :–** ದೇವರ ಜ್ಞಾನ ತಿಳಿದವರು ಯಾರೂ ಹಾಗೆ ಹೇಳುವುದಿಲ್ಲ. ಈ ಮಾತುಗಳು ಅಂದಿದ್ದಾರೆಂದರೇ ಅವರಿಗೆ ದೈವಜ್ಞಾನ ತಿಳಿಯದೆಂದು ಅರ್ಥ. ನಾವು ಮುಸ್ಲಿಮ್‌ರು ಆದ್ದರಿಂದ ನೀರನ್ನು ನೀರು ಎನ್ನಬಾರದು ಪಾನೀ ಎಂದೇ ಅನ್ನಬೇಕು ಎಂದು ಒಬ್ಬನು ಹೇಳುತ್ತಿದ್ದಾನೆ. ಅವನು ಪ್ರಯಾಣದಲ್ಲಿ ಬೇರೆ ಊರಿಗೆ ಹೋದಾಗ ನೀರು ದಾಹವಾಯಿತು. ಆಗ ಅಲ್ಲಿ ಪಾನೀ ಪಾನೀ ಎಂದು ಕೇಳಿದ್ದಾನಂತೆ. ಆ ಪ್ರಾಂತದವರಿಗೆ ತುರಕ ಭಾಷೆ ಬರುವುದಿಲ್ಲ ಆದ್ದರಿಂದ ಪಾನೀ ಎಂದರೇ ಅರ್ಥವಾಗಲಿಲ್ಲ. ಕೊನೆಗೆ ನೀರು ಎಂದು ಕೇಳಿದರೇನೇ ನೀರು ಸಿಕ್ಕಿವೆ. ಕೊನೆಗೆ ಪಾನೀಯನ್ನು ನೀರೆಂದು ಆತನು ಅಂದಿದ್ದಾನಲ್ಲವೆ! ಹಾಗೇ ದೇವರನ್ನು ಕನ್ನಡ ಭಾಷೆಯಲ್ಲಿ ದೇವರು ಎನ್ನುತ್ತಾರೆ. ಇಂಗ್ಲೀಷ್ ಭಾಷೆಯಲ್ಲಿ ಗಾಡ್ ಎನ್ನುತ್ತೇವೆ. ಹಾಗೇ ಉರ್ದೂ ಭಾಷೆಯಲ್ಲಿ ಅಲ್ಲಾಹ್ ಎಂದು ಹೇಳುತ್ತೇವೆ. ಮನುಷ್ಯನಿಗೆ ಮತಗಳ ಹುಚ್ಚು ಹೋಗ

ದಂತಿರುವವರೆಗೂ ಜ್ಞಾನಿಯಾಗಿ ಬದಲಾಗುವುದಿಲ್ಲ. ಅಲ್ಲಿಯವರೆಗೂ ಪ್ರಪಂಚ ಮಾಯೆಯಲ್ಲಿ ಸಿಲುಕಿಕೊಂಡು ಇರಬೇಕಾಗಿದ್ದೇ. ಇಂದಿಗಾದರೂ ಮೀರಿರುವುದು ಏನೂ ಇಲ್ಲ. ಎಲ್ಲ ಮತಗಳನ್ನು ಗೌರವಿಸೋಣ, ಎಲ್ಲಾ ಮತಗಳನ್ನು ದೇವರೇ ಸೃಷ್ಠಿಸಿದಾಗ ಅವುಗಳನ್ನು ನೋಡಿ ಅಸೂಯೆಪಡುವುದು ಸರಿಯೇನಾ? ತಂದೆಗೆ ಮುಂದೆ ಹಿಂದೆ ಹುಟ್ಟಿರುವ ಮಕ್ಕಳೆಲ್ಲರೂ ಸಮಾನವೇ ಒಬ್ಬನೇ ತಂದೆಗೆ ಹುಟ್ಟಿದ ಅನ್ನತಮ್ಮಂದಿರನ್ನು ನಾವು ದ್ವೇಷಿಸುವುದಿಲ್ಲ ಅಲ್ಲವೆ! ಹಾಗೇ ಒಂದೇ ದೇವರ ಸೃಷ್ಠಿ ಆದ ಎಲ್ಲ ಮತಗಳನ್ನು ಪ್ರೇಮಿಸೋಣ. ಆಗ ಎಲ್ಲರಿಗೂ ತಂದೆಯಾದ ದೇವರ ದಯೆಯನ್ನು ಹೊಂದಬಹುದು.

ದೇವರು ಮೂಸಾಗೆ 'ತೌರಾತ್' ಗ್ರಂಥವನ್ನು ಕೊಟ್ಟಿದ್ದಾನೆ. (ದೇವರು ಕೃಷ್ಣನಿಂದ ಭಗವದ್ಗೀತೆಯನ್ನು ಹೇಳಿಸಿದ್ದಾನೆ.) ಆದರೇ ಖುರಾನ್ (6–91) ರಲ್ಲಿ "ದೇವರು ಯಾವ ಮನುಷ್ಯನ ಮೇಲೆ ತನ್ನ ಜ್ಞಾನವನ್ನು ಪ್ರಸರಿಸಲಿಲ್ಲ ಎಂದು ಹೇಳಿದಾಗ ಈ ಅವಿಶ್ವಾಸರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲಿಲ್ಲ." (ಈ ವಾಕ್ಯವನ್ನನುಸರಿಸಿ ಮೂಸಾ ಸಾಧಾರಣ ಮನುಷ್ಯ ಅಲ್ಲವೆಂದು, ಮೂಸಾ ವಿಷಯದಲ್ಲಿ ಮನುಷ್ಯನಿಗೆ ತನ್ನ ಜ್ಞಾನವನ್ನು ಕೊಡಲಿಲ್ಲವೆಂದು, ಮೂಸಾಗೆ ತೌರಾತ್ ಗ್ರಂಥವನ್ನು ಕೊಟ್ಟಿದ್ದೇನೆ ಅಂದಾಗ, ದೇವರನ್ನು ಮನುಷ್ಯರು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲವೆಂದು ತಿಳಿಯುತ್ತಿದೆ.) "ಅವರನ್ನು ಕೇಳುವ ಮೂಸಾ ತಂದಿರುವ ತೌರಾತ್ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ? ಆ ಗ್ರಂಥ ಒಂದು ಜ್ಯೋತಿ, ಮನುಷ್ಯರಿಗಾಗಿ ಮಾರ್ಗದರ್ಶಕತ್ವ ನೀವು ಅದನ್ನು ಬೇರೆಬೇರೆ ಕಾಗದಗಳಾಗಿ (ಬೇರೆಬೇರೆ ಗ್ರಂಥಗಳಾಗಿ) ವಿಭಜಿಸಿ ತೋರಿಸುತ್ತಿದ್ದಾರೆ. ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದಾರೆ." (ಇಲ್ಲಿಯವರೆಗು ಇರುವ ವಾಕ್ಯದಲ್ಲಿ 'ತೌರಾತ್' ದೇವರ ಜ್ಞಾನ ಜ್ಯೋತಿ ಎಂದು ತಿಳಿಯುತ್ತದೆ. ಅದನ್ನೇ ಮೂರು ಗ್ರಂಥಗಳಾಗಿ ವಿಭಜಿಸಿ ಮೂರು ಮತಗಳಾಗಿ ಮಾಡಿಕೊಂಡಿದ್ದಾರೆ. ಅದರಲ್ಲಿನ ಜ್ಞಾನ ವಿಷಯಗಳನ್ನು ಕೆಲವರು ಬಚ್ಚಿಟ್ಟಿದ್ದಾರೆ.) "ನಿಮಗಾಗಲೀ, ನಿಮ್ಮ ಹಿರಯರಿಗಾಗಲೀ ತಿಳಿಯದ

ಎಷ್ಟೋ ವಿಷಯಗಳು ಇದರಲ್ಲಿ ತಿಳಿಸಲಾಗಿವೆ. ತೌರಾತ್‌ನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ." ಇದನ್ನನುಸರಿಸಿ ತೌರಾತ್‌ನ್ನು ಹೇಳಿದ ಮೂಸಾ ಸಾಕಾರ ದೇವರಾದ ಭಗವಂತನೆಂದು ತಿಳಿದುಹೋಗುತ್ತದೆ. ಈ ಆಯತ್ ಓದಿದ ನಂತರ ಕಾಣಿಸದ ದೇವರು ಕಾಣಿಸುವ ವ್ಯಕ್ತಿಯಾಗಿ ಬರುತ್ತಾನೆಂದು ತಿಳಿಯುತ್ತದೆ. ಆ ಮಾತಿಗೆ ಈ ಆಯತ್‌ಯೇ ಸಾಕ್ಷಿ. ಈ ವಾಕ್ಯದಲ್ಲಿ ದೇವರು ಕೊಟ್ಟಿರುವ ತೌರಾತ್‌ನ್ನು (ಭಗವದ್ಗೀತೆಯನ್ನು) ಮೂರು ಬೇರೆಬೇರೆ ಗ್ರಂಥಗಳಾಗಿ ಅರೆದುಕೊಂಡಿದ್ದೇವೆಂದು ಅವೇ ಭಗವದ್ಗೀತೆ, ಬೈಬಲ್, ಖುರಾನ್ ಎಂದು ತಿಳಿಯುತ್ತದೆ. ಖುರಾನ್‌ನಿಂದ ಈ ಆಯತ್ ತಿಳಿದ ಮುಸ್ಲಿಮ್‌ರು ಎಷ್ಟೋ ಜ್ಞಾನ ತಿಳಿದವರಾಗಿ ಉಳಿದ ಮತಗಳಾಗಿ ಇರುವವರಿಗೂ ಸಹ ನಾವೆಲ್ಲಾ ಒಂದೇ ತೌರಾತ್ ಜ್ಞಾನವನ್ನು ಆಧಾರ ಮಾಡಿಕೊಂಡು ಇದ್ದೇವೆಂದು ಹೇಳಬೇಕು. ತೌರಾತ್ ಗ್ರಂಥವನ್ನೇ ಮೂರು ಗ್ರಂಥಗಳಾಗಿ ಮಾಡಿಕೊಂಡಿದ್ದೇವೆಂದು ಹೇಳಬೇಕು. ತೌರಾತ್ ಗ್ರಂತವನ್ನೇ ಮೂರು ಗ್ರಂಥಗಳಾಗಿ ಮಾಡಿಕೊಂಡಿದ್ದೇ ವೆಂದು ತಿಳಿದ ಮುಸ್ಲಿಮ್‌ರು ಉಳಿದ ಎರಡು ಗ್ರಂಥಗಳನ್ನು ಗೌರವ ಪ್ರದವಾಗಿ ನೋಡಬೇಕು. ಖುರಾನ್‌ಗೆ ಕೊಟ್ಟಿರುವ ಗೌರವವನ್ನೇ ಅವುಗಳಿಗೂ ಸಹ ಕೊಡಬೇಕು.

ಇದೆಲ್ಲಾ ಮುಸ್ಲಿಮ್‌ರಿಗೇ ಏಕೆ ಹೇಳುತ್ತಿದ್ದೇವೆಂದರೇ! ಖುರಾನ್‌ನಲ್ಲಿ 6-91 ಆಯತ್‌ನಲ್ಲಿ ಈ ರಹಸ್ಯವೆಲ್ಲಾ ಇದೆ. ಆದ್ದರಿಂದ ಮುಸ್ಲಿಮ್‌ರಿಗೇ ಈ ವಿಷಯವನ್ನು ಹೇಳುತ್ತಿದ್ದೇವೆ. ಇತರ ಮತಗಳಲ್ಲಿ ಇಲ್ಲದ ಜ್ಞಾನ, ಇತರರ ಹತ್ತಿರವಿಲ್ಲದ ಮತಸಾಮರಸ್ಯ ಮುಸ್ಲಿಮ್‌ರಿಗೆ ಇರಬೇಕು. ಆದರೇ ಆ ವಿಷಯದಲ್ಲಿ ಮುಸ್ಲಿಮ್‌ರು ಪೂರ್ತಿ ವಿರುದ್ಧವಾಗಿ ಇದ್ದಾರೆ. ತಮ್ಮ ಖುರಾನ್ ಗ್ರಂಥ ಕನ್ನಡದಲ್ಲಿ ಮುದ್ರಿಸಿ ಹಿಂದೂಗಳು ಓದುವಂತೆ ಉಚಿತವಾಗಿ ಕಳುಹಿಸುತ್ತಿದ್ದಾರೆ. ಇತರರು ಸಹ ಖುರಾನ್ ಜ್ಞಾನ ತಿಳಿಯಬೇಕೆಂದು, ಖುರಾನ್ ಗ್ರಂಥವನ್ನು ಕೊಟ್ಟರೆ ಅದಕ್ಕಿಂತ ಒಳ್ಳೆಯ ಕೆಲಸವಿಲ್ಲ. ಆದರೆ ಹಾಗೆ ಅಲ್ಲದೆ ಹಿಂದೂಗಳು ಖುರಾನ್ ಓದಿ ಅವರ ಮತದೊಳಗೆ ಬರಬೇಕೆಂದು ಕೊಡುತ್ತಿದ್ದಾರೆ. ಗ್ರಂಥದ ಮೇಲೆ ಮಕ್ಕಾ ಗೊಂಬೆ, ಚಂದ್ರನು, ನಕ್ಷತ್ರದ ಗೊಂಬೆ ಇರುವ ಗ್ರಂಥವನ್ನು ಕೊಟ್ಟರೇ

ಹಿಂದೂಗಳು ಅದನ್ನು ಗೌರವವಾಗಿ ತೆಗೆದುಕೊಂಡು, ಕೈಲಾದರೇ ಓದುತ್ತಿದ್ದಾರೆ ಇಲ್ಲದೇ ಹೋದರೇ ಇಲ್ಲ. ಅದೇ ಯಾರಾದರೂ ತಮ್ಮ ಗ್ರಂಥವನ್ನು ಮುಸ್ಲಿಮ್‌ರಿಗೆ ಕೊಟ್ಟರೆ ಅದನ್ನು ಮುಟ್ಟಿಕೊಳ್ಳುವುದಕ್ಕೂ ಸಹ ಇಷ್ಟಪಡುವುದಿಲ್ಲ. ಒಬ್ಬ ಹಿಂದೂ ಸ್ತ್ರೀ ಭಗವದ್ಗೀತೆ ಗ್ರಂಥವನ್ನು ಒಬ್ಬ ಮುಸ್ಲಿಮ್ ಸ್ತ್ರೀಗೆ ಕೊಟ್ಟಿದ್ದಾಳೆ. ಆ ಗ್ರಂಥ ಮನೆಯಲ್ಲಿರುವಾಗ ಆಕೆ ಗಂಡ ನೋಡಿ 'ಓಂ' ಅಕ್ಷರವಿರುವ ಗ್ರಂಥವನ್ನು ಮನೆಯೊಳಗೂ ಸಹ ಬರಬಾರದೆಂದು ಹೆಂಡತಿಯನ್ನು ದೂಷಿಸಿ ಗೀತಾ ಗ್ರಂಥವನ್ನು ರೋಡ್ಡಿನ ಹೊರಗೆ ಮಲಿನವಾದ ನೀರಿನ ಗುಂಡಿಯಲ್ಲಿ ಹಾಕಿದ ಸಂಘಟನೆ ನಡೆದಿದೆ. ಮುಸ್ಲಿಮ್‌ರು ಕೊಟ್ಟಿರುವ ಖುರಾನ್ ಗ್ರಂಥವನ್ನು ಹಿಂದೂಗಳು ಓದಿದರೂ, ಓದದೇಹೋದರೂ ಗೌರವವಾಗಿ ಉನ್ನತ ಸ್ಥಾನದಲ್ಲಿಯೇ ಇಟ್ಟುಕೊಂಡಿರುವಾಗ, ಮುಸ್ಲಿಮ್‌ರು ಭಗವದಸ್ಗೀತೆಯನ್ನು 'ಓಂ' ಗೊಂಬೆಯನ್ನು ದ್ವೇಷಿಸುತ್ತಾ ಹೊರಗೆ ಬಿಸಾಕುವುದರಲ್ಲಿ ಭಗವದ್ಗೀತೆ ಕಡೆ ಎಷ್ಟು ದ್ವೇಷವಿದೆಯೋ ಅರ್ಥವಾಗುತ್ತಿದೆ. ಭಗವದ್ಗೀತೆಯಲ್ಲಿನ ಜ್ಞಾನವನ್ನು ನಾನು ಧೃಢೀಕರಿಸುತ್ತಿದ್ದೇನೆಂದು ಖುರಾನ್ ಭಗವದ್ಗೀತೆಯನ್ನು ದೊಡ್ಡದಾಗಿ ಹೇಳಿದಾಗ, ಭಗವದ್ಗೀತೆಯ ಕಡೆ ಮುಸ್ಲಿಮ್‌ರು ಏಕೆ ಗೌರವವನ್ನು ತೋರಿಸಲಿಲ್ಲ? ಎನ್ನುವುದು ಪ್ರಶ್ನೆಯಾಗಿ ಉಳಿದುಹೋಗಿದೆ. ಖುರಾನ್‌ನಲ್ಲಿ (6–91) ಆಯತ್‌ನಲ್ಲಿ **"ದೇವರು ಕೊಟ್ಟಿರುವ ತೌರಾತ್‌ನ್ನೇ (ಭಗವದ್ಗೀತೆಯನ್ನೇ) ಕಾಗದಗಳಾಗಿ ಅರೆದು ಕೊಂಡು ಓದುಕೊಳ್ಳುತ್ತಿದ್ದಾರೆಂಬ"** ಮಾತನ್ನು ಮುಸ್ಲಿಮ್‌ರು ನೋಡಲಿಲ್ಲವೇ? ಇದನ್ನನುಸರಿಸಿ ಮತಸಾಮರಸ್ಯ ಮನುಷ್ಯರಲ್ಲಿ ಇಲ್ಲದೇ ಹೋದ ಈ ಕಾಲದಲ್ಲಿ, ಮೂರು ಗ್ರಂಥಗಳನ್ನು ಓದಿ ಅರ್ಥ ಮಾಡಿಕೊಂಡರೇ, ಸ್ವಲ್ಪ ಕಾಲಕ್ಕಾದರೂ ನಾವು ಸಕ್ರಮ ಮಾರ್ಗದಲ್ಲಿ ಪ್ರವೇಶಿಸಬಲ್ಲೆವು.

## ಮುಕ್ತಾಯ



**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಮಂದಿ ಅಲ್ಲವೆಂದರೂ ಅದು ಅಸತ್ಯವಲ್ಲ.**

**ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.**

**ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.**

**ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ**

**--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**Cell:09705864675, 09440556968, 09611133635**

# ದೇವರ ಚಿಹ್ನ






**ಎಲ್ಲ ಮತಗಳಿಗೂ ಸಂಬಂಧಪಟ್ಟಿರುವುದು**

**www.thraithashakam.org**